# ಸಿ. ಹನುಮೇಗೌಡರ
# "ಚುಂಚಾದ್ರಿ ಚಂದ್ರಿಕೆ" ಮಹಾಕಾವ್ಯ :
# ಒಂದು ಅಧ್ಯಯನ

(ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ
ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ)


ಸಂಶೋಧಕರು: ಪಿ. ಸತೀಶ್

ಮಾರ್ಗದರ್ಶಕರು:
ಡಾ.ಕೆ.ಎಲ್. ಗೋಪಾಲಕೃಷ್ಣಯ್ಯ



೨೦೦೬-೦೭
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
ಮತ್ತು
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸಿ. ಹನುಮೇಗೌಡರ

# "ಚುಂಚಾದ್ರಿ ಚಂದ್ರಿಕೆ" ಮಹಾಕಾವ್ಯ : ಒಂದು ಅಧ್ಯಯನ

(ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ
ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ
ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಎಂ.ಫಿಲ್. ಪದವಿಯ ಸಂಪ್ರಬಂಧ)

ಸಂಶೋಧಕರು: ಪಿ. ಸತೀಶ್

ಮಾರ್ಗದರ್ಶಕರು : ಡಾ.ಕೆ.ಎಲ್. ಗೋಪಾಲಕೃಷ್ಣಯ್ಯ

೨೦೦೧–೦೨

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
ಮತ್ತು
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಇವರಿಗೆ,

**ಮಾನ್ಯ ನಿರ್ದೇಶಕರಿಗೆ,** ದಿನಾಂಕ: ೨೫-೦೮-೨೦೦೭
'ಅಧ್ಯಯನಾಂಗ',
ಕನ್ನಡ ವಿಶ್ವವಿದ್ಯಾಲಯ,
ಹಂಪಿ.

ಮೂಲಕ,

**ಮಾನ್ಯ ಸಂಚಾಲಕರು,**
ಎಂ.ವೀ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ,
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ,
ಬೆಂಗಳೂರು.

ಮಾನ್ಯರೇ,

**ವಿಷಯ: ಎಂ.ಫಿಲ್. ಪ್ರಬಂಧ ಸಲ್ಲಿಸುತ್ತಿರುವ ಬಗ್ಗೆ.**

* * *

೨೦೦೬-೦೭ನೇ ಸಾಲಿನಲ್ಲಿ ಮೇಲ್ಕಂಡ ಸ್ನಾತಕೋತ್ತರ ಕೇಂದ್ರಗಳಲ್ಲಿ ***ಎಂ.ಫಿಲ್*** ವಿದ್ಯಾರ್ಥಿಯಾಗಿ ಅಧ್ಯಯನ ನಡೆಸಿ, ***"ಸಿ. ಹನುಮೇಗೌಡರ 'ಚುಂಚಾದ್ರಿ ಚಂದ್ರಿಕೆ': ಒಂದು ಅಧ್ಯಯನ"*** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ***ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ***ನವರ ಮಾರ್ಗದರ್ಶನದಲ್ಲಿ ಪ್ರಬಂಧ ರಚನೆ ಮಾಡಿ ತಮ್ಮಲ್ಲಿಗೆ ಸಲ್ಲಿಸುತ್ತಿದ್ದೇನೆ.

ವಂದನೆಗಳು,

ಇಂತಿ ತಮ್ಮ ವಿಶ್ವಾಸಿ,

ಪಿ.ಸತೀಶ್ ೨೫.೦೮.೦೭.
***(ಪಿ.ಸತೀಶ್)***
ಎಂ.ಫಿಲ್ ವಿದ್ಯಾರ್ಥಿ
<u>ವಿಳಾಸ:</u>
ನಂ.೪೬೨ - "ಸುಮ",
೧೩ನೇ "ಬಿ" ಮುಖ್ಯರಸ್ತೆ,
ವಿಜಯನಗರ ೨ನೇಹಂತ,
ಅತ್ತಿಗುಪ್ಪೆ, ಬೆಂಗಳೂರು-೪೦
ದೂರವಾಣಿ - ೦೮೦-೨೩೪೫೦೪೫೩

**<u>ಮಾರ್ಗದರ್ಶಕರ ಅನುಮೋದನೆ:</u>**

ಕೆ.ಎಲ್. ಗೋಪಾಲಕೃಷ್ಣಯ್ಯ 20/08/2002
*(ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ)*
<u>ವಿಳಾಸ:</u>
ನಂ.೨೨೭೩, ೨೨ನೇ ಅಡ್ಡರಸ್ತೆ,
ಕೆ.ಆರ್.ರಸ್ತೆ, ಬನಶಂಕರಿ ೨ನೇ ಹಂತ,
ಬೆಂಗಳೂರು-೭೦
ದೂರವಾಣಿ - ೦೮೦-೨೬೭೬೩೫೪೦

## ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬–೦೭ನೇ ಸಾಲಿನ ಎಂ.ಫಿಲ್., ಪದವಿಗಾಗಿ **"ಸಿ.ಹನುಮೇಗೌಡರ ಚುಂಚಾದ್ರಿ ಚಂದ್ರಿಕೆ ಮಹಾಕಾವ್ಯ: ಒಂದು ಅಧ್ಯಯನ"** ಸಂಪ್ರಬಂಧವನ್ನು **ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

**(ಪಿ.ಸತೀಶ್)**
ಎಂ.ಫಿಲ್. ವಿದ್ಯಾರ್ಥಿ

ದಿನಾಂಕ: ೨೫–೦೮–೨೦೦೭
ಸ್ಥಳ: ಬೆಂಗಳೂರು

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್., ಪದವಿಗಾಗಿ **"ಸಿ.ಹನುಮೇಗೌಡರ ಚುಂಚಾದ್ರಿ ಚಂದ್ರಿಕೆ ಮಹಾಕಾವ್ಯ: ಒಂದು ಅಧ್ಯಯನ"** ಸಂಪ್ರಬಂಧವನ್ನು **ಶ್ರೀ.ಪಿ.ಸತೀಶ್**ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಕೆ.ಎಲ್. ಗೋಪಾಲ ಕೃಷ್ಣಯ್ಯ.

ದಿನಾಂಕ: ೨೫-೦೮-೨೦೦೭ (ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ)

ಸ್ಥಳ: ಬೆಂಗಳೂರು ಮಾರ್ಗದರ್ಶಕರು

# ಪರಿವಿಡಿ

## ಸಿ.ಹನುಮೇಗೌಡರ " ಚುಂಚಾದ್ರಿ ಚಂದ್ರಿಕೆ" ಮಹಾಕಾವ್ಯ : ಒಂದು ಅಧ್ಯಯನ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಂಗ್ರಹವಾಗಿ ಕಥೆ ಹೇಳುವ, ಬೇಗನೆ ಓದಿ ಮುಗಿಸಬಹುದಾದ ಚಿಕ್ಕಪುಟ್ಟ ಗದ್ಯ ಕೃತಿಗಳೇ ಹೆಚ್ಚಿನ ಪ್ರಮಾಣದಲ್ಲಿ ಜನಪ್ರಿಯವಾಗಿರುವ ಇಂದಿನ ದಿನಗಳಲ್ಲಿ ಮಹಾಕಾವ್ಯಗಳ ರಚನೆ ಮತ್ತು ಅಧ್ಯಯನ ಅಪ್ರಸ್ತುತ; ಅವುಗಳ ಕಾಲ ಎಂದೋ ಮುಗಿದು ಹೋಗಿದೆ ಎನ್ನುವ ಭಾವನೆ ಸಾಹಿತ್ಯ ವಲಯದಲ್ಲಿದೆ. ಮಹಾಕಾವ್ಯ ಹಳೆಯ ತಲೆಮಾರಿನವರಿಗೆ ಸಂಬಂಧ ಪಟ್ಟಿದ್ದು; ಅಷ್ಟು ದೀರ್ಘ ಕೃತಿಗಳನ್ನು ಓದಲು ಈಗಿನವರಿಗೆ ಬಿಡುವೆಲ್ಲಿ? ಎನ್ನುವ ಮಾತುಗಳೂ ಕೇಳಿ ಬರುತ್ತಿವೆ. ಅಲ್ಲಿ ಇಲ್ಲಿ ಬಿಡುಗಡೆ ಕಾಣುವ ಮಹಾಕಾವ್ಯಗಳು ಹೇಳ ಹೆಸರಿಲ್ಲದಂತೆ ನೇಪಥ್ಯಕ್ಕೆ ಸರಿದು ಬಿಡುತ್ತಿವೆ. ಓದುಗರ ಬೆಂಬಲವಿಲ್ಲದೆ ಸೊರಗುವ ಇಂಥ ಕೃತಿಗಳು, ಕಾಡಿನ ಹೂಗಳಂತೆ ಜನರ ಅರಿವಿಗೆ ಬರುವುದೇ ಇಲ್ಲ.

ಈ ಎಲ್ಲ ಮಾತುಗಳು ಮಹಾಕಾವ್ಯಗಳನ್ನು ಕುರಿತ ಅಭಿಪ್ರಾಯಗಳೇ ವಿನಃ ತೀರ್ಮಾನಗಳಲ್ಲ. ಮಹಾಕಾವ್ಯದ ವ್ಯಾಪ್ತಿ ವಿಸ್ತಾರವಾದದ್ದರಿಂದ, ಇಂದಿನ ಸಾಹಿತ್ಯದ ಓದುಗ ತನ್ನ ಲೌಕಿಕ ಜೀವನದ ಗಡಿಬಿಡಿಯಲ್ಲಿ ಬಹುತೇಕ ಮುಳುಗಿ ಹೋಗಿರುವುದು ಈ ಅಭಿಪ್ರಾಯ ಮೂಡಲು ಕಾರಣವಾಗಿರಬಹುದು. ಆದರೆ ಯಾವುದೇ ಒಂದು ಕೃತಿ ಅದು ಮಹಾಕಾವ್ಯವಾಗಲಿ, ಒಂದು ಹನಿಗವಿತೆಯಾಗಲಿ ಅದು ಸತ್ವಪೂರ್ಣವಾಗಿದ್ದರೆ ಖಂಡಿತಾ ಜನ ಗುರುತಿಸುತ್ತಾರೆ – ಎನ್ನುವುದಕ್ಕೆ ಸಾಕಷ್ಟು ಪುರಾವೆಗಳಿವೆ. ವೀರಪ್ಪ ಮೊಯಿಲಿಯವರ **“ಶ್ರೀರಾಮಾನ್ವೇಷಣ”,** ಚಂದ್ರಶೇಖರ ಕಂಬಾರರ **“ಚಕೋರಿ”,** ಹಂಪಿಯ ಕನ್ನಡ ವಿಶ್ವವಿದ್ಯಾಲಯ ಬುಡಕಟ್ಟು ಅಧ್ಯಯನ ವಿಭಾಗ ಹೊರತಂದಿರುವ "**ಬುಡಕಟ್ಟು ಮಹಾಕಾವ್ಯ ಸಂಪುಟಗಳು**" ಇಲ್ಲಿ ಉಲ್ಲೇಖಾರ್ಹ.

ಮಹಾಕಾವ್ಯವನ್ನು ಇಡೀ ಮನುಷ್ಯ ಜೀವನದ ವ್ಯಾಪ್ತಿಗೆ ಹೋಲಿಸುವುದುಂಟು. ಮಾನವ ಬದುಕಿನ ಸುದೀರ್ಘ ಅನುಭವಗಳ ಮೊತ್ತವು, ಮಹಾಕಾವ್ಯಗಳಲ್ಲಿ ಪಾತ್ರಗಳಾಗಿ, ಸನ್ನಿವೇಶಗಳಾಗಿ ಮಿಡಿಯುತ್ತದೆ. ಮನುಷ್ಯ ಜೀವನ ಬದಲಾವಣೆಗಳೊಡನೆ ಬೆಳೆದಂತೆಲ್ಲ, ಹಿಗ್ಗಿದಂತೆಲ್ಲ ಹೊಸ ಹೊಸ ಆಶಯ ಮತ್ತು ಅಭಿವ್ಯಕ್ತಿಗಳೊಡನೆ ಮಹಾಕಾವ್ಯಗಳು ಜನ್ಮ ತಾಳುತ್ತಲೇ ಇರುತ್ತವೆ. ಹೀಗಾಗಿ ಮಹಾಕಾವ್ಯಗಳ ರಚನೆ ಮತ್ತು ಓದು ಎಂದಿಗೂ ನಿಲ್ಲುವಂಥದ್ದಲ್ಲ ಎನ್ನುವುದನ್ನು ಗಮನಿಸಬೇಕಾಗಿದೆ.

ಮಹಾಕಾವ್ಯಗಳು ಅಪ್ರಸ್ತುತವೆನ್ನುವ ಈ ಕಾಲಮಾನದಲ್ಲಿ ಹುಟ್ಟಿಕೊಂಡ "ಚುಂಚಾದ್ರಿ ಚಂದ್ರಿಕೆ" ಒಂದು ಆಧ್ಯಾತ್ಮಿಕ ಮಹಾಕಾವ್ಯ. ಶಿಕ್ಷಣ ತಜ್ಞ, ಶಿಕ್ಷಣ ಅಧಿಕಾರಿಗಳಾದ ಶ್ರೀಸಿ.ಹನುಮೇಗೌಡರಿಂದ ರಚನೆಯಾಗಿರುವ ಈ ಮಹಾಕಾವ್ಯ, ಆಧುನಿಕ ಸಾಹಿತ್ಯ ಪರಿಸರದಲ್ಲಿ ಒಂದು ಮೈಲಿಗಲ್ಲು. ಶ್ರೀ ಆದಿಚುಂಚನಗಿರಿ ಕ್ಷೇತ್ರದ ಮಹಿಮೆ, ಮಹತ್ವಗಳನ್ನು ವಸ್ತುವಾಗಿರಿಸಿಕೊಂಡು ಈ ಕೃತಿ ರಚನೆಯಾಗಿದೆ. ಶ್ರೀ ಮಠದ ಸ್ವಾಮೀಜಿಗಳಾದ ಶ್ರೀ ಬಾಲಗಂಗಾಧರರ ಜೀವನ ಮತ್ತು ಸಾಧನೆಗಳ ವರ್ಣನೆ ಈ ಕೃತಿಯ ಜೀವಾಳವಾಗಿದೆ.

"ಚುಂಚಾದ್ರಿ ಚಂದ್ರಿಕೆ", ಆಧ್ಯಾತ್ಮಿಕ ಮತ್ತು ಧಾರ್ಮಿಕ ವಿಚಾರಗಳನ್ನು ಒಳಗೊಂಡ ಒಂದು ವಿಶಿಷ್ಟ ಕೃತಿ. ಮಹಾಕಾವ್ಯವೊಂದರ ಅಧ್ಯಯನ ಇಂದಿಗೂ ಕೂಡ ಪ್ರಸ್ತುತವಾಗಿದೆ ಎಂಬ ಭಾವನೆಯಿಂದ ಈ ಕಾವ್ಯವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಆಧುನಿಕ ಕಾಲದ, ಜಾಗತೀಕರಣದ ಮನಸ್ಸೊಂದು ಆಧ್ಯಾತ್ಮಿಕ ಮಹಾಕಾವ್ಯವೊಂದಕ್ಕೆ ಹೇಗೆ ಮಿಡಿಯ ಬಹುದೆಂಬುದನ್ನು ನನಗೆ ನಾನೇ ಅರ್ಥಮಾಡಿಕೊಳ್ಳಬೇಕಿತ್ತು. ಈಗಾಗಲೇ ಸಾಕಷ್ಟು ಚರ್ಚೆ, ಅಧ್ಯಯನಗಳಾಗಿರುವ ಹಳೆಯ ಕೃತಿಗಳನ್ನು ಆಯ್ದುಕೊಳ್ಳುವುದಕ್ಕಿಂತ, ಹೊಸ ಕೃತಿಯೊಂದರ ಮೌಲ್ಯಗಳನ್ನು ಹೊಸ ದೃಷ್ಟಿಕೋನದಿಂದ ಅಧ್ಯಯನಕ್ಕೆ ಒಳಪಡಿಸುವ ಆಸಕ್ತಿ, ಈ ಆಯ್ಕೆಯ ಹಿಂದಿನ ಪ್ರೇರಣೆ.

"ಚುಂಚಾದ್ರಿ ಚಂದ್ರಿಕೆ" ಕಾವ್ಯಾಧ್ಯಯನವನ್ನು **೦೧.ಪ್ರಸ್ತಾವನೆ ೦೨.ಕಾವ್ಯ ಪರಿಚಯ ೦೩. ನಾಥ ಪಂಥ ೦೪. ಕಾವ್ಯ ವಿಶ್ಲೇಷಣೆ ೦೫. ಕಾವ್ಯ ಸೌಂದರ್ಯ ೦೬. ಸಮಾರೋಪ ೦೭.ಗ್ರಂಥಸೂಚಿ ಮತ್ತು ೦೮.ಅನುಬಂಧ**ಗಳೆನ್ನುವ ಎಂಟು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. **ಪ್ರಸ್ತಾವನೆಯಲ್ಲಿ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ; ಮಹಾಕಾವ್ಯ ಸ್ವರೂಪ; ಕವಿಯ ಜೀವನ ಮತ್ತು ಕಾವ್ಯ ಪ್ರೇರಣೆ**ಗಳೆಂಬ ಅಧ್ಯಾಯಗಳಿವೆ. ಎರಡನೇ ಅಧ್ಯಾಯ, ಕಾವ್ಯ ಪರಿಚಯ. ಕಾವ್ಯದ ವಸ್ತು ವಿಚಾರ ಕುರಿತಂತೆ ಸಂಕ್ಷಿಪ್ತವಾದ ಕಥೆಯನ್ನು ಇಲ್ಲಿ ಬರೆಯಲಾಗಿದೆ. ಮೂರನೆಯ ಅಧ್ಯಾಯ **ನಾಥ ಪಂಥ.** ಇಲ್ಲಿ **ನಾಥ ಪಂಥದ ಮೂಲ, "ನಾಥ" ಪದದ ಅರ್ಥ ವಿವರಣೆ, ನಾಥ ಪಂಥೀಯರ ವೇಷ ಭೂಷಣಗಳು, ನಾಥ ಪಂಥದ ದ್ವಾದಶ ಶಾಖೆಗಳು, ನಾಥ ಪಂಥದ ಸಿದ್ಧಾಂತಗಳು, ನಾಥ ಪಂಥದ ಪ್ರಭೇದಗಳು, ಕರ್ನಾಟಕದಲ್ಲಿ ನಾಥ ಪಂಥ, ಪ್ರಮುಖ ನಾಥಕ್ಷೇತ್ರ: ಆದಿಚುಂಚನಗಿರಿ, ಚುಂಚಾದ್ರಿ ಚಂದ್ರಿಕೆಯಲ್ಲಿ ನಾಥ ಪಂಥ ವಿವರ, ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಗೋರಕ್ಷ ಪ್ರಸಂಗ** – ಹೀಗೆ ಕಿರು ಅಧ್ಯಾಯಗಳನ್ನು ವಿಂಗಡಿಸಿಕೊಂಡು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ನಾಲ್ಕನೆಯ ಅಧ್ಯಾಯ **ಕಾವ್ಯ ವಿಶ್ಲೇಷಣೆ.** ಇಲ್ಲಿ **ಹರಿ–ಅಜರ ಹೋರಾಟ, ಚುಂಚ–ಕಂಚರ ದಮನ, ಚುಂಚಾದ್ರಿ ಪರಿಸರ, ನಾಥ ಪಂಥ ಮಹನೀಯರುಗಳ ಬೋಧನೆ, ಶ್ರೀ ಬಾಲಗಂಗಾಧರನಾಥರ ಜೀವನ ಮತ್ತು**

ಸಾಧನೆಗಳೆಂದು ಉಪಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಐದನೆಯ ಅಧ್ಯಾಯವನ್ನು ಕಾವ್ಯ ಸೌಂದರ್ಯ-ಮಹಾಕಾವ್ಯವಾಗಿ "ಚುಂಚಾದ್ರಿ ಚಂದ್ರಿಕೆ" ಎಂದು ಕರೆಯಲಾಗಿದೆ. ಈ ಅಧ್ಯಾಯದಲ್ಲಿ ಕಾವ್ಯದಲ್ಲಿನ ಪ್ರತಿಮೆಗಳ ಸೌಂದರ್ಯ ಮತ್ತು ಚುಂಚಾದ್ರಿ ಚಂದ್ರಿಕೆಯನ್ನು ಮಹಾಕಾವ್ಯವೆಂದು ಒಪ್ಪಬಹುದೇ? ಎನ್ನುವ ಚರ್ಚೆಯನ್ನು ಮಾಡಲಾಗಿದೆ. ಆರನೆಯ ಅಧ್ಯಾಯ ಸಮಾರೋಪ ಮತ್ತು ಏಳನೆಯ ಅಧ್ಯಾಯದಲ್ಲಿರುವುದು ಗ್ರಂಥಸೂಚಿ. ಎಂಟನೇ ಅಧ್ಯಾಯದಲ್ಲಿ ಶ್ರೀ ಆದಿಚುಂಚನಗಿರಿಗೆ ಸಂಬಂಧಿಸಿದ ಭಾವಚಿತ್ರಗಳಿವೆ.

"ಚುಂಚಾದ್ರಿ ಚಂದ್ರಿಕೆ" ಮಹಾಕಾವ್ಯದ ಒಟ್ಟಾರೆ ಲಕ್ಷಣ, ಪ್ರಭಾವ, ವ್ಯಾಪ್ತಿ ಕುರಿತು ಚಿಂತಿಸಲಾಗಿದೆ. ಪ್ರತಿ ವರ್ಣನೆಗಳಲ್ಲಿ ತುಂಬಿ ಹರಿಯುವ ಕವಿಯ ಕಾವ್ಯ ಪ್ರತಿಭೆಯನ್ನು ವಿಶ್ಲೇಷಿಸಲಾಗಿದೆ. ನಕಾರಾತ್ಮಕ ಭಾವನೆಗಳಿಗೆ ಎಲ್ಲಿಯೂ ಎಡೆ ನೀಡಿಲ್ಲ; ಕಾವ್ಯದ ಹೃದಯ ಸಂವಾದಕ್ಕೆ ಅವಕಾಶ ಕೊಡಲಾಗಿದೆ.

ಕಾವ್ಯವನ್ನು ಒಂದು ನಿರ್ದಿಷ್ಟ ದೃಷ್ಟಿಕೋನದಿಂದ ನೋಡಿದಾಗ ಇದು ಒಬ್ಬ ವ್ಯಕ್ತಿಯ ದೃಷ್ಟಿಯಿಂದ ನಡೆದ ಕಾವ್ಯ ವಿಶ್ಲೇಷಣೆ ಅಷ್ಟೆ. ಇತರರಿಗೆ ಈ ಕಾವ್ಯ ಬೇರೆಯದೇ ಆದ ಅನುಭವ ನೀಡಲು ಸಾಧ್ಯವಿದೆ. ಈ ಬರವಣಿಗೆ ಕುರಿತಂತೆ ಬರುವ ಎಲ್ಲಾ ಸಲಹೆ-ಸೂಚನೆಗಳಿಗೆ ಸದಾ ಸ್ವಾಗತವಿರುತ್ತದೆ.

# ಮಹಾಕಾವ್ಯ ಸ್ವರೂಪ

"ಮಹಾಕಾವ್ಯ" ಎನ್ನುವ ಪದದಲ್ಲಿ "ಮಹಾ" ಎನ್ನುವುದು ಕಾವ್ಯದ ವಿಶೇಷತೆಯನ್ನು ಸೂಚಿಸುತ್ತದೆ. "ಮಹಾ" ಎಂದರೆ ಕಾವ್ಯಧ ಗಾತ್ರ ದೊಡ್ಡದು; ವಿಸ್ತಾರವಾದುದು; ಆಂತರಿಕ ಸತ್ವದಿಂದ ಕೂಡಿರುವಂಥದ್ದು ಎನ್ನುವ ಅರ್ಥ ಕಾಣುತ್ತದೆ. ಭಾವಗೀತೆ, ಕಥನ ಕವಿತೆ, ಖಂಡ ಕಾವ್ಯಗಳಿಂದ ಭಿನ್ನವಾಗಿ, ವಿಸ್ತಾರವಾದ ನೆಲೆಯಲ್ಲಿ ತನ್ನದೇ ಆದ ಛಾಪು ಮೂಡಿಸುವಂಥದ್ದು 'ಮಹಾಕಾವ್ಯ' ಎನಿಸಿಕೊಳ್ಳುತ್ತದೆ. "ಗಂಭೀರವಾದ ಛಂದಸ್ಸಿನಲ್ಲಿ ರಚಿತವಾದ ಒಂದು ಸುದೀರ್ಘವಾದ ಕಥನ ಕಾವ್ಯವೇ ಮಹಾಕಾವ್ಯ" ಎಂಬುದನ್ನು ಬಹುಜನರು ಒಪ್ಪಿಕೊಳ್ಳುತ್ತಾರೆಂದು ಡಾ.ಜಿ.ಎಸ್.ಎಸ್ ಹೇಳುತ್ತಾರೆ. *೧

ಪಾಶ್ಚಿಮಾತ್ಯರು 'EPIC', 'Heroic Poetry', 'Classic', 'Great Poetry'– ಮೊದಲಾದ ಪದಗಳನ್ನು ಈ ಅರ್ಥದಲ್ಲಿ ಬಳಸುತ್ತಾರೆ. ಪಾಶ್ಚಾತ್ಯರಲ್ಲಿ ಕಾವ್ಯ(Poetry) ಎನ್ನುವ ಕಲ್ಪನೆಯು ಛಂದೋಬದ್ಧವಾದ ಕೃತಿಗಳಿಗೆ ಮಾತ್ರ ಮೀಸಲಾಗಿತ್ತು. ಆದರೆ ಭಾರತೀಯರಲ್ಲಿ ಕಾವ್ಯ ಎನ್ನುವ ಶಬ್ದವನ್ನು ಈಗ ನಾವು ಸಾಹಿತ್ಯ ಎನ್ನುವ ಶಬ್ದವನ್ನು ಬಳಸುವಂತೆ ವಿಶಾಲಾರ್ಥದಲ್ಲಿ ಬಳಸಲಾಗುತ್ತಿತ್ತು. ಸಂಸ್ಕೃತ ವಿದ್ವಾಂಸರಿಗೆ ಛಂದೋಬದ್ಧ ರಚನೆಗಳಾದ ರಾಮಾಯಣ, ಮಹಾಭಾರತಗಳು ಹೇಗೆ ಕಾವ್ಯವೋ ಹಾಗೆಯೇ ಬಾಣಭಟ್ಟನ ಗದ್ಯ ಕೃತಿ ಕಾದಂಬರಿಯೂ ಕಾವ್ಯವೇ! ಮಾತ್ರವಲ್ಲ, ಕಾಳಿದಾಸನ ನಾಟಕಗಳೂ ಕಾವ್ಯವೇ. ಆದ್ದರಿಂದ ಅವರು, ಓದಿ ಕೇಳಬಹುದಾದ ಶ್ರವ್ಯ ಕಾವ್ಯ ಮತ್ತು ಪ್ರದರ್ಶಿಸಿ ನೋಡಬಹುದಾದ ದೃಶ್ಯ ಕಾವ್ಯ ಎಂದು ವಿಂಗಡಿಸುತ್ತಿದ್ದರು. ಛಂದಸ್ಸನ್ನು ಕಾವ್ಯ ರಚನೆಗೆ ಮಾತ್ರವಲ್ಲದೆ ವ್ಯಾಕರಣ, ನಿಘಂಟು, ಅಲಂಕಾರಶಾಸ್ತ್ರಗಳಿಗೆ ಬಳಸುತ್ತಿದ್ದುದು ಇದಕ್ಕೆ ಕಾರಣವಾಗಿರಬಹುದು. ಭಾರತೀಯರಲ್ಲಿ 'ಮಹಾಕಾವ್ಯ', 'ಇತಿಹಾಸ', 'ಪುರಾಣ', 'ಪ್ರಬಂಧ' ಗಳೆನ್ನುವ ಪದಗಳು ಬಳಕೆಯಲ್ಲಿವೆ. ಮಹಾಕಾವ್ಯಕ್ಕೆ ಸಂವಾದಿಯಾಗಿ "EPIC" ಎನ್ನುವ ಪದ ಬಳಸಬಹುದೆಂದು ಡಾ.ಜಿ.ಎಸ್.ಎಸ್ ಹೇಳುತ್ತಾರೆ. ಭಾಮಹನೆನ್ನುವ ಆಲಂಕಾರಿಕ 'ಮಹಾಕಾವ್ಯ'ದ ಲಕ್ಷಣವನ್ನು ಹೀಗೆ ಹೇಳುತ್ತಾನೆ:

**"ಸರ್ಗಬಂಧೋ ಮಹಾಕಾವ್ಯಂ ಮಹತಾಂ ಚ ಮಹಚ್ಚಯತ್**
**ಅಗ್ರಾಮ್ಯ ಶಬ್ದ ಮಥ್ಯಂ ಚ ಸಾಲಂಕಾರಂ ಸದಾಶ್ರಯಮ್"**

"ಮಹಾಕಾವ್ಯ – ಅನೇಕ ಸರ್ಗಗಳಿಂದ ಕೂಡಿದ್ದು; ಅದು ಮಹಾಪುರುಷರನ್ನು ಕುರಿತಿರುವುದಲ್ಲದೆ ಪರಿಮಾಣದಲ್ಲಿಯೂ ಮಹತ್ತಾಗಿರುವುದು. ಶಬ್ದಗಳಲ್ಲಿ ಅಗ್ರಾಮ್ಯತೆ, ಅರ್ಥದಲ್ಲಿ ಗುರುತ್ವಗಳನ್ನು ಹೊಂದಿರುತ್ತದೆ. ಅಲಂಕಾರಯುಕ್ತವಾಗಿರುತ್ತದೆ. ಉತ್ತಮ ವಸ್ತುವನ್ನು

ಒಳಗೊಂಡಿರುತ್ತದೆ; ಅಥವಾ ಸತ್ಯ ಘಟನೆಗಳನ್ನು ಆಶ್ರಯಿಸಿರುತ್ತದೆ – ಎಂದು ಕಾವ್ಯದ ವ್ಯಾಪ್ತಿ, ವಸ್ತು, ವರ್ಣನೆ, ಉದ್ದೇಶ ನಾಯಕ ಪಾತ್ರಾದಿಗಳ ಸ್ವರೂಪವನ್ನು ವಿವರಿಸಲಾಗುತ್ತದೆ.*೨

ಡಾ.ಜಿ.ಎಸ್.ಶಿವರುದ್ರಪ್ಪನವರು ತಮ್ಮ "ಮಹಾಕಾವ್ಯ ಸ್ವರೂಪ" ಕೃತಿಯಲ್ಲಿ ಮಹಾಕಾವ್ಯ ಲಕ್ಷಣವನ್ನು ಹೀಗೆ ಗುರುತಿಸಿದ್ದಾರೆ:

೦೧. ಮಹಾಕಾವ್ಯ ಆದಷ್ಟು ಸುದೀರ್ಘವಾದ ಕಥನ ಕಾವ್ಯವಾಗಿರುತ್ತದೆ.

೦೨. ವೀರನೊಬ್ಬನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು, ವೀರ ರಸ ಪ್ರಧಾನವಾಗಿ, ವೀರ ಜೀವನ ಪ್ರಧಾನವಾಗಿ ಘಟನೆಗಳನ್ನು ವೈಭವೋಪೇತವಾಗಿ ಕಟ್ಟಿಕೊಡುತ್ತದೆ.

೦೩. ಒಂದು ನಿರ್ದಿಷ್ಟ ವರ್ಗದ ಕೇಳುಗರಿಗೆ ಕಟ್ಟಿ ಹಾಡುವಂತೆ ರಚನೆಯಾಗಿರುತ್ತದೆ.

೦೪. ತೀವ್ರತರವಾದ ಮತ – ಧಾರ್ಮಿಕ ಪ್ರಜ್ಞೆಯನ್ನು ಒಳಗೊಂಡಿರುತ್ತದೆ.

೦೫. ಕವಿಯು ಕಾವ್ಯದ ಜೊತೆ ಜೊತೆಗೇ ಇತಿಹಾಸವನ್ನು ಹೇಳುತ್ತಿರುತ್ತಾನೆ.

೦೬. ಒಂದು ನಿರ್ದಿಷ್ಟ ಗಂಭೀರವಾದ ಛಂದಸ್ಸಿನಲ್ಲಿ ರಚನೆಯಾಗಿರುತ್ತದೆ.

ಮಹಾಕಾವ್ಯ – ಹೆಸರೇ ಸೂಚಿಸುವಂತೆ ವ್ಯಾಪ್ತಿಯಲ್ಲಿ ಸುದೀರ್ಘವಾಗಿದ್ದು, ಮಹತ್ತರ ಮೌಲ್ಯಗಳನ್ನು, ದರ್ಶನ ರೂಪದಲ್ಲಿ ಪ್ರಚುರಪಡಿಸುವ ವಿಶಾಲ ನೆಲೆಯ ಕಾವ್ಯ ಪ್ರಕಾರ. ಉಳಿದೆಲ್ಲ ಕಾವ್ಯ ಪ್ರಕಾರಗಳಿಗಿಂತಲೂ ಸತ್ವ ಮತ್ತು ವ್ಯಾಪ್ತಿ ದೃಷ್ಟಿಯಿಂದ ಬಹು ಎತ್ತರಕ್ಕೆ ನಿಲ್ಲಬಹುದಾದದ್ದು – ಮಹಾಕಾವ್ಯ. ವ್ಯಾಪ್ತಿ ವಿಶಾಲವಾಗಿರುವುದರಿಂದ ಘಟನೆಗಳು, ಪಾತ್ರಗಳು ಇಡಿಕಿರಿದು ತುಂಬಿರುತ್ತವೆ. ವ್ಯಾಪಕವಾದ ಕಥೆಯೊಂದನ್ನು ಒಳಗೊಂಡಿದ್ದು, ಕನಿಷ್ಟ ಮೂರು ಪ್ರಧಾನ ಪಾತ್ರಗಳನ್ನು (**ನಾಯಕ – ನಾಯಕಿ – ಪ್ರತಿನಾಯಕ**) ಪಡೆದಿರುತ್ತವೆ. ಪೋಷಕ ಪಾತ್ರಗಳು ಎಷ್ಟಾದರೂ ಬರಬಹುದು. ಹಿಂದಿನ ಮಹಾಕಾವ್ಯಗಳಲ್ಲಿ ಹದಿನೆಂಟು ರೀತಿಯ ವರ್ಣನೆಗಳು (**ಅಷ್ಟಾದಶ ವರ್ಣನೆಗಳು**) ಮತ್ತು **ಆರು ಋತುಗಳ ವರ್ಣನೆ** ಕಡ್ಡಾಯವಾಗಿ ಬರಲೇಬೇಕೆನ್ನುವ ನಿಯಮವಿತ್ತು. ನಿರ್ದಿಷ್ಟ ಛಂದಸ್ಸೊಂದನ್ನು ಮಹಾಕಾವ್ಯ ಪಡೆದಿದ್ದು, ಕ್ರಮಬದ್ಧ ರಚನೆಗೆ ಒಳಪಟ್ಟಿರುತ್ತದೆ. ಜಾನಪದ, ಸಂಪ್ರದಾಯ, ಪುರಾಣ, ಇತಿಹಾಸ ಇವುಗಳಲ್ಲಿ ಯಾವುದಾದರೊಂದು ವಿಷಯಕ್ಕೆ ಸಂಬಂಧಪಟ್ಟಂಥ ವಸ್ತು ಮಹಾಕಾವ್ಯಗಳಿಗೆ ಮೂಲ ಆಕರವಾಗಿರುತ್ತದೆ. ಪ್ರಧಾನ ಪಾತ್ರವು ಕೆಲವು ವರ್ಷ ಅಲೆದಾಡುವ ಸನ್ನಿವೇಶ, ಹಲವು ಮಹಾಕಾವ್ಯಗಳಲ್ಲಿ ಸಾಮಾನ್ಯವಾಗಿ ಕಂಡು ಬಂದಿರುತ್ತದೆ. ಜಗತ್ತಿನ ಬಹು ಪಾಲು ಮಹಾಕಾವ್ಯಗಳಲ್ಲಿ ಸ್ತ್ರೀ ಪಾತ್ರಗಳ ಸಂಖ್ಯೆ ಬಹಳ ಕಡಿಮೆ ಇರುತ್ತದೆ.

ಮಹಾಕಾವ್ಯವೊಂದು **ದರ್ಶನ** ಮತ್ತು **ರಸ** **ನಿಷ್ಪತ್ತಿಗೆ** ಕಾರಣವಾಗುವಂತೆ ರಚನೆಗಾಗಿರಬೇಕಾಗುತ್ತದೆ. "**ಸಹಜ ಒಳನೋಟದ ಗ್ರಹಿಕೆ ಮತ್ತು ಅಖಂಡತೆ**" ಯನ್ನು "ದರ್ಶನ"

ಎನ್ನುತ್ತಾರೆ. ವಾಸ್ತವದ ಹಿಂದಿನ ಸತ್ಯವನ್ನು ಪ್ರಕಟಿಸುವಂಥದ್ದಾಗಿರುತ್ತದೆ; ದೇವರು, ಪ್ರಕೃತಿ ಮತ್ತು ಮನುಷ್ಯರ ಸಂಬಂಧಗಳನ್ನು ಅವಲೋಕಿಸುತ್ತದೆ. ಕವಿಯ ಮನೋಧರ್ಮ, ಸೌಂದರ್ಯ ಪ್ರಜ್ಞೆ ಮತ್ತು ಉದಾತ್ತತೆಗಳನ್ನು ಆಧರಿಸಿ ಒಬ್ಬೊಬ್ಬ ಮಹಾಕವಿಯೂ ಒಂದೊಂದು ವೈಯಕ್ತಿಕತೆಯನ್ನು, ವೈಶಿಷ್ಟ್ಯವನ್ನು ಕಾಯ್ದುಕೊಳ್ಳಲು ಸಾಧ್ಯವಿದೆ. ಮಹಾಕಾವ್ಯಗಳು ವಸ್ತು ನಿಷ್ಠ, ವೈಯಕ್ತಿಕ ಅನಿಸಿಕೆಗಳನ್ನು ತಿಳಿಸಬಯಸಿದಾಗ ಈಚೆಗೆ **'ದರ್ಶನ'** ಎಂಬ ಪರಿಭಾಷೆಯನ್ನು ಬಳಸಲಾಗುತ್ತಿದೆ.

ಕವಿಯ ಜೀವನದ ಅನೇಕ ಸಂಗತಿಗಳು ಕಾವ್ಯದಲ್ಲಿ ಕಾಣಿಸಿಕೊಳ್ಳಲು ಸಾಧ್ಯವಿದೆ. ಇಲ್ಲಿನ ಘಟನೆಗಳ ವರ್ಣನೆ ಕವಿಯ ರಸಭಾವಗಳ ಮತ್ತು ಆತನ ಮನಸ್ಥಿತಿಯನ್ನು ಅವಲಂಬಿಸಿರುತ್ತದೆ. ಆ ಕ್ಷಣದ ಕವಿಯ ಮನಸ್ಥಿತಿ ಮತ್ತು ವಸ್ತುವಿನ ಸಂದರ್ಭದ ಮುಖಾಮುಖಿಯಿಂದ ಕಾವ್ಯ ರಚನೆಯಾಗುತ್ತಾ ಹೋಗುತ್ತದೆ. **ಪದ ಪ್ರಯೋಗ ವಿನ್ಯಾಸ** (Poetic Diction) ಕೂಡ ಕವಿಯ ವೈಶಿಷ್ಟ್ಯಕ್ಕೆ ಕಾರಣವಾಗುತ್ತದೆ. – ಇವೆಲ್ಲ ಹದವಾಗಿ ಕೂಡಿದಾಗ, ಸಾವಯವದಿಂದ ಸೇರಿದಾಗ, ಪ್ರತಿಭೆ ತಾಕಿದಾಗ **ಮಹಾಕಾವ್ಯವೊಂದು** ಮೂಡುತ್ತದೆ ಎಂದು ವಿದ್ವಾಂಸರು ವಿಶ್ಲೇಷಿಸುತ್ತಾರೆ.

ಮಹಾಕಾವ್ಯವನ್ನು ಕುರಿತಂತೆ ಪಾಶ್ಚಿಮಾತ್ಯ ಮತ್ತು ಭಾರತೀಯ ಲಾಕ್ಷಣಿಕರ ಅಭಿಪ್ರಾಯಗಳನ್ನು ತೌಲನಿಕವಾಗಿ ನೋಡಿದಾಗ ಅನ್ನಿಸುವುದು ಇಷ್ಟು:

೦೧. ಕಾವ್ಯದ ಸುದೀರ್ಘತೆಯನ್ನು, ವಿಸ್ತಾರವನ್ನು ಇಬ್ಬರೂ ಒಪ್ಪಿಕೊಳ್ಳುತ್ತಾರೆ.

೦೨. ಪಾಶ್ಚಿಮಾತ್ಯರು ಮಹಾಕಾವ್ಯ, ವೀರ ವ್ಯಕ್ತಿ, ವೀರ ಭಾವ, ವೀರ ಜೀವನ, ಪ್ರಧಾನವಾಗಿರಬೇಕೆಂದಿದ್ದಾರೆ. ಭಾರತೀಯ ಅಲಂಕಾರಿಕರು ಈ ಮಾತನ್ನು ಪ್ರತ್ಯೇಕವಾಗಿ ಹೇಳದಿದ್ದರೂ, ಈ ಸಂಗತಿ ಇಲ್ಲಿನ ಹಲವು ಮಹಾಕಾವ್ಯಗಳಲ್ಲಿ ವ್ಯಕ್ತಗೊಂಡಿದೆ.

೦೩. ಕಾವ್ಯದ ರೂಪ ಮತ್ತು ಛಂದಸ್ಸಿನ ವಿಚಾರದಲ್ಲಿ ಇಬ್ಬರ ನಡುವೆ ಕೊಂಚ ವ್ಯತ್ಯಾಸವಿದೆ. ಪಾಶ್ಚಿಮಾತ್ಯರು ಮಹಾಕಾವ್ಯ, ಪದ್ಯರೂಪದ್ದು ಮತ್ತು ಉದ್ದಕ್ಕೂ ಒಂದೇ ರೀತಿಯ ಗಂಭೀರ ಛಂದಸ್ಸನ್ನು ಒಳಗೊಂಡಿರುವಂಥದ್ದು ಎಂದಿದ್ದಾರೆ. ಆದರೆ ಭಾರತೀಯರು, ಮಹಾಕಾವ್ಯ ಪದ್ಯ ಅಥವಾ ಗದ್ಯ ಅಥವಾ ಪದ್ಯ ಗದ್ಯ ಮಿಶ್ರಿತ ಚಂಪೂ ರೂಪದಲ್ಲಿ ಕೂಡ ಇರಬಹುದೆಂದು ಹೇಳಿದ್ದಾರೆ. ವಿವಿಧ ಶ್ರವ್ಯ ವೃತ್ತಗಳಿಂದ ಮಹಾಕಾವ್ಯ ರಚಿತವಾಗಬೇಕು ಎಂದಿರುವುದರಿಂದ ಛಂದೋ ವೈವಿಧ್ಯತೆ ಇಲ್ಲಿನ ಲಕ್ಷಣವಾಗಿದೆ.

೦೪. ಪಾಶ್ಚಿಮಾತ್ಯ ವಿಮರ್ಶಕರು ಮಹಾಕಾವ್ಯ, ಇತಿಹಾಸವನ್ನು ಹೇಳುವುದರ ಜೊತೆಗೆ ಜನಾಂಗ ಪ್ರಜ್ಞೆ ಮತ್ತು ರಾಷ್ಟ್ರೀಯ ಪ್ರಜ್ಞೆಗಳನ್ನು ಒಳಗೊಂಡಿರುತ್ತದೆ ಎಂದಿದ್ದಾರೆ. ಆದರೆ ನಮ್ಮ ಲಾಕ್ಷಣಿಕರು ರಾಷ್ಟ್ರೀಯತೆ ಬಗ್ಗೆ ಎಲ್ಲಿಯೂ ಮಾತನಾಡುವುದಿಲ್ಲ. ಆದರೆ ರಾಮಾಯಣ ಮಹಾಭಾರತಗಳಲ್ಲಿ ಜನಾಂಗ ಪ್ರಜ್ಞೆ, ಮತ ಧರ್ಮ ಪ್ರಜ್ಞೆಯನ್ನು ಕಾಣಬಹುದು.

೦೫. ಧರ್ಮ ಪ್ರಧಾನವಾದ ನಮ್ಮ ದೇಶದಲ್ಲಿ, ಮಹಾಕಾವ್ಯ, ಧರ್ಮ-ಅರ್ಥ-ಕಾಮ-ಮೋಕ್ಷಗಳ ಫಲಪ್ರಾಪ್ತಿಗೆ ಸಾಧಕವಾದವುಗಳೆಂದು ಭಾವಿಸಲಾಗಿದೆ. ಆದರೆ ಪಾಶ್ಚಿಮಾತ್ಯರಲ್ಲಿ ೧೩ನೇ ಶತಮಾನದವರೆಗೆ ಧರ್ಮ, ಮಹಾಕಾವ್ಯವನ್ನು ಪ್ರವೇಶಿಸಿಯೇ ಇರಲಿಲ್ಲವೆಂಬುದನ್ನು ಗಮನಿಸಬಹುದಾಗಿದೆ.

**ಮಹಾಕಾವ್ಯ: ಉಗಮ ಮತ್ತು ವಿಕಾಸ:**

ಮಹಾಕಾವ್ಯಗಳಲ್ಲಿ ಎರಡು ವಿಧ: ೦೧. ಒಬ್ಬ ಕವಿಯಿಂದ ರಚಿತವಾದವು ಮತ್ತು ೦೨. ಒಬ್ಬ ಕವಿಯಿಂದ ರಚನೆಯಾಗದೆ ಬಹುಕಾಲದಲ್ಲಿ ಅನೇಕ ಕವಿಗಳು ಸೇರಿ, ಕಾಲದಿಂದ ಕಾಲಕ್ಕೆ ಬೆಳೆಸಿದ ಮಹಾಕಾವ್ಯಗಳು. ಪಂಪ, ಕುವೆಂಪು, ವರ್ಜಿಲ್, ಡಾಂಟೆ, ಮಿಲ್ಟನ್ ಮೊದಲಾದವರ ಕೃತಿಗಳು ಮೊದಲ ವರ್ಗಕ್ಕೆ ಸೇರಿದರೆ, ವ್ಯಾಸ, ವಾಲ್ಮೀಕಿ, ಹೋಮರ್ ಮೊದಲಾದವರು ರಚಿಸಿದ ಕೃತಿಗಳು ಎರಡನೇ ವರ್ಗಕ್ಕೆ ಸೇರುತ್ತವೆ. ಮೊದಲ ವರ್ಗದ ಮಹಾಕಾವ್ಯಗಳಲ್ಲಿ ಕವಿಯ ಜೀವನಕ್ಕೆ ಸಂಬಂಧಿಸಿದ ಮಾಹಿತಿ, ಆತ ಆ ಕೃತಿ ರಚಿಸಲು ಕಾರಣ, ಉಂಟಾದ ಪ್ರೇರಣೆ ಎಲ್ಲವುಗಳೂ ಸ್ಪಷ್ಟವಾಗಿ ನಮೂದಿತವಾಗಿರುತ್ತದೆ. ಆದರೆ ಎರಡನೇ ವರ್ಗದ ಮಹಾಕಾವ್ಯಗಳಲ್ಲಿ ಈ ರೀತಿಯ ಮಾಹಿತಿ ಅಲಭ್ಯವಾಗಿದ್ದು, ಒಬ್ಬ ಕವಿಯ ರಚನೆಯೆನ್ನುವುದಕ್ಕಿಂತ ಒಂದು ಜನಾಂಗದ, ಸಮಗ್ರ ದೇಶದ ರಚನೆಗಳೆಂದು ಕರೆಯುವುದು ಸರಿ ಎನ್ನುತ್ತಾರೆ ವಿಮರ್ಶಕರು.

ಎರಡನೇ ವರ್ಗದ ಮಹಾಕಾವ್ಯಗಳು ಸಾಮಾನ್ಯವಾಗಿ ಪ್ರಾಚೀನ ಕಾಲಮಾನದಲ್ಲಿ ರಚನೆಯಾದವುಗಳು. ಇವುಗಳ ಹುಟ್ಟಿನ ಬಗ್ಗೆ ವಿದ್ವಾಂಸರು ಚರ್ಚಿಸಿದ್ದಾರೆ. ಕೆಲವು ವಿದ್ವಾಂಸರು ಋಗ್ವೇದಗಳಲ್ಲಿ ಬರುವ 'ಸಂವಾದ'ಗಳು ಈ ಬಗೆಯ ಮಹಾಕಾವ್ಯಗಳಿಗೆ ಮೂಲವೆಂದು ಅಭಿಪ್ರಾಯ ಪಟ್ಟಿದ್ದಾರೆ. **ವಿಂಟರ್‌ನಿಟ್ಸ್** ಎನ್ನುವ ವಿದ್ವಾಂಸ ಪ್ರಾಚೀನ ಕಾಲಮಾನದ ಲಾವಣಿಗಳು (Ancient Ballads) ಮಹಾಕಾವ್ಯದ ಮೂಲವಿರಬಹುದೆಂದು ಹೇಳುತ್ತಾನೆ. ಎರಡನೇ ಅಭಿಪ್ರಾಯಕ್ಕೆ ಬಹಳಷ್ಟು ವಿದ್ವಾಂಸರ ಒಪ್ಪಿಗೆಯಿದೆ.

ಬ್ರಾಹ್ಮಣ ಗ್ರಂಥಗಳಲ್ಲಿ ನರ ಮನುಷ್ಯರನ್ನು ಪ್ರಶಂಸೆ ಮಾಡುವ ಹಾಡುಗಳಿವೆ. ಇವುಗಳೊಂದಿಗೆ ಆಖ್ಯಾನಗಳು, ಇತಿಹಾಸ-ಪುರಾಣಕ್ಕೆ ಸಂಬಂಧಿಸಿದ ವಿವರಗಳನ್ನು ಒಳಗೊಂಡ ಹಾಡುಗಳನ್ನು ಅವರು ತಮ್ಮ ಯಜ್ಞ ಮೊದಲಾದ ಸಾಮಾಜಿಕ ಕ್ರಿಯೆಗಳನ್ನು ಆಚರಿಸುವಾಗ ಹಾಡುತ್ತಾರೆ. ಇವನ್ನು '**ಗಾಥಾನಾರಾಶಂಸಿ**'ಗಳು ಎನ್ನುತ್ತಾರೆ. ಈ ಬಗೆಯ ಹಾಡುಗಳು '**ಸೂತರು**' ಎಂದು ಕರೆಯಲ್ಪಡುವ ಬ್ರಾಹ್ಮಣ ಋಷಿಗಳ ಮೂಲಕ ಜನ ಸಾಮಾನ್ಯರನ್ನು ತಲುಪಿವೆ. ಈ "**ಸೂತರು**" ಯುದ್ಧಗಳಲ್ಲಿ ಸಾರಥಿಗಳಾಗಿ ಭಾಗವಹಿಸುತ್ತಿದ್ದುದರಿಂದ ಅಲ್ಲಿನ ವೀರರನ್ನು ಕುರಿತಂತೆ, ಯುದ್ಧ ಸಂಗತಿ ಕುರಿತಂತೆ ಜನಪದ ಗೀತೆಗಳನ್ನು ಕಟ್ಟಿ ಹಾಡುವ ಅಭ್ಯಾಸ ಇಟ್ಟುಕೊಂಡಿದ್ದರು. ಇವರ ಮೂಲಕ ಪ್ರಚಾರವಾದ ಹಾಡುಗಳು '**ಕುಶೀಲವ**' ಎಂದು ಕರೆಯಲ್ಪಡುವ ಸಂಚಾರಿ

ಗಾಯಕರ ಮೂಲಕ ಇನ್ನಷ್ಟು ಜನರನ್ನು ತಲುಪಿದವು. ಹೀಗೆ ಕಾಲದಿಂದ ಕಾಲಕ್ಕೆ ಪ್ರಚಲಿತದಲ್ಲಿದ್ದ ಹಾಡುಗಳೇ ಸ್ವತಂತ್ರಗೊಂಡು, **'ಮಹಾಕಾವ್ಯ'**ಗಳ ಮೂಲ ಸಾಮಗ್ರಿಯಾಗಿರಬಹುದು. ಹೀಗೆ ಇತಿಹಾಸ ಮತ್ತು ಜಾನಪದ ಕಥೆಗಳು ಸೇರಿಕೊಂಡು ಮಹಾಕಾವ್ಯಗಳು ಸೃಷ್ಟಿಯಾಗಿರಬಹುದು. ರಾಮಾಯಣ ಮತ್ತು ಮಹಾಭಾರತಗಳ ಮೂಲ ರಚನೆಗಳು ಇವೇ ಆಗಿರಬಹುದೆಂದು ವಿದ್ವಾಂಸರು ತರ್ಕಿಸಿದ್ದಾರೆ. (ಮಹಾಭಾರತದ ಮೂಲ ಆಕರ ಹಾಗೂ ಮೂಲ ಕವಿಯಾದ ವ್ಯಾಸರ ಬಗೆಗಿನ ಚರ್ಚೆಯನ್ನು **ಎ.ಆರ್.ಕೃಷ್ಣಶಾಸ್ತ್ರಿ**ಯವರ **ವಚನ ಭಾರತ**ದ ಪೀಠಿಕೆಯಲ್ಲೂ, ರಾಮಾಯಣದ ಮೂಲ ಕವಿಯ ಹಾಗೂ ಮೂಲ ಕಥೆಯ ಚರ್ಚೆಯನ್ನು **ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ**ನವರ **'ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ',** ಪುಟ೧೭೨ ರಲ್ಲಿ ನೋಡಬಹುದು)

## ಮಹಾಕಾವ್ಯದ ವಸ್ತು ವಿಚಾರ:

ಮಹಾಕಾವ್ಯಗಳ ವಸ್ತು ಸಾಮಾನ್ಯವಾಗಿ ಇತಿಹಾಸ-ಜಾನಪದ ಮತ್ತು ಪುರಾಣಗಳನ್ನು ಅವಲಂಬಿಸಿದ್ದು, ಅವು ಆದಷ್ಟು ಪ್ರಾಚೀನ ಕಾಲಕ್ಕೆ ಸಂಬಂಧಿಸಿರುತ್ತದೆ. ಮಹಾಕಾವ್ಯ ಮಹಾವ್ಯಕ್ತಿಗಳ ನಡವಳಿಕೆಯನ್ನು ಕುರಿತದ್ದಾಗಿರುತ್ತದೆ. ಹಾಗಾಗಿ ಅರಿಸ್ಟಾಟಲ್ ಮಹಾಕಾವ್ಯವನ್ನು **'ಉದಾತ್ತ ವ್ಯಕ್ತಿಗಳ ಅನುಕರಣ'** ಎನ್ನುತ್ತಾನೆ.[*೩] ಮಹಾಕಾವ್ಯದ ವಸ್ತು ಗಂಭೀರವಾಗಿದ್ದು, ಮಹಾಕಾರಣಗಳನ್ನು ಆಧಾರವಾಗಿ ಪಡೆದ ಮಹಾ ಘಟನೆಗಳಿಂದ ಕೂಡಿರುತ್ತದೆ. ಕಾವ್ಯದಲ್ಲಿ ಹದಿನೆಂಟು (ಅಷ್ಟಾದಶ) ವರ್ಣನೆಗಳಿರಬೇಕು; ಮಂತ್ರ-ದೂತ-ಪ್ರಯಾಣ-ಆಜಿ(ಯುದ್ಧ) ಮತ್ತು ನ್ಯಾಯಕಾಭ್ಯುದಯಗಳೆಂಬ ಐದು ಅಂಶಗಳು ಮಹಾಕಾವ್ಯದಲ್ಲಿದ್ದರೆ, ಅದು **'ವೀರ ಕಾವ್ಯ'**ವಾಗುತ್ತದೆ. ಮಂತ್ರ ಎಂದರೆ ಗೂಢಾಚಾರರ ಮೂಲಕ ಶತ್ರುಗಳ ಉಪಾಯ ತಿಳಿದು ಆಪ್ತಸಚಿವರೊಂದಿಗೆ ಮಂತ್ರಾಲೋಚನೆ ಮಾಡುವುದು; **'ದೂತ'** ಎಂದರೆ ಯುದ್ಧಕ್ಕೆ ಮೊದಲು ಶತ್ರುಗಳ ಕಡೆಗೆ ದೂತರನ್ನು ಕಳುಹಿಸಿಕೊಡುವುದು; **'ಪ್ರಯಾಣ'**ವೆಂದರೆ ಸೈನ್ಯ ಸಮೇತ ಯುದ್ಧ ಭೂಮಿಗೆ ತಲುಪುವುದು; **'ಆಜಿ'** ಎಂದರೆ ಶತ್ರುವಿನೊಂದಿಗೆ ನಡೆಯುವ ಯುದ್ಧ; **'ನ್ಯಾಯಕಾಭ್ಯುದಯ'** ಎಂದರೆ ಶತ್ರುಗಳನ್ನು ರಣದಲ್ಲಿ ಗೆದ್ದು ವಿಜಯಿಯಾಗುವುದು ಮತ್ತು ನಾಯಕ-ನಾಯಕಿಯರ ಮಿಲನ. ಉದಾ.: ರಾಮಾಯಣ. ಒಟ್ಟಿನಲ್ಲಿ ಮಹಾಕಾವ್ಯದ ವಸ್ತು ಉದಾತ್ತ ವ್ಯಕ್ತಿಗಳ, ಮಹಾವೀರರ ಸಾಹಸ ಮತ್ತು ಅದ್ಭುತ ಕಾರ್ಯಗಳನ್ನು ಕುರಿತದ್ದಾಗಿರುತ್ತದೆ. ಮಹಾಕಾವ್ಯದ ವಸ್ತು ಕೇವಲ ಭೂಮಿಗೆ ಸಂಬಂಧಿಸಿದ್ದಲ್ಲ. ದೇವತೆಗಳಿಗೂ-ಮಾನವರಿಗೂ ಮಧ್ಯೆ ಸಂಬಂಧವೇರ್ಪಡುತ್ತದೆ. ನರರು, ವಾನರರು, ರಾಕ್ಷಸರು, ದೇವತೆಗಳು, ಅತಿಮಾನುಷ ಜೀವಿಗಳು, ಪ್ರಾಣಿಗಳು, ಪಕ್ಷಿಗಳು - ಈ ಎಲ್ಲವೂ ಮಹಾಕಾವ್ಯದ ವಸ್ತುವಿನಲ್ಲಿ ವ್ಯವಹರಿಸುತ್ತವೆ. ಸಾಹಸ-ವೀರ-ಶೃಂಗಾರ- ಇವು ಮಾನವನ ಮೂಲಭೂತ ಪ್ರವೃತ್ತಿಗಳಾದ್ದರಿಂದ ಸಾಮಾನ್ಯವಾಗಿ ಜಗತ್ತಿನ ಮಹಾಕಾವ್ಯಗಳ ವಸ್ತು ವೀರ ಅಥವಾ

ಶೃಂಗಾರವಾಗಿರುತ್ತದೆ. ಮಹಾಕಾವ್ಯಗಳಲ್ಲಿ ಕಾಣಿಸಿಕೊಳ್ಳುವ ಸಂಘರ್ಷಗಳು, ಅಂದಿನ ಧ್ಯೇಯ, ಆದರ್ಶ, ಮೌಲ್ಯ ಪ್ರಜ್ಞೆಗಳನ್ನು ಎತ್ತಿ ತೋರುವ ಸಾಧನಗಳಾಗಿವೆ. ಕುವೆಂಪುರವರ **'ಶ್ರೀರಾಮಾಯಣ ದರ್ಶನಂ'** – ಇಂದಿನ ತತ್ವಜ್ಞಾನ, ವೈಜ್ಞಾನಿಕ ದೃಷ್ಟಿ, ಪಾಶ್ಚಾತ್ಯ – ಪೌರಾತ್ಯ ಕಾವ್ಯ–ಕಲಾ–ತತ್ವ ದೃಷ್ಟಿಗಳಿಂದ ಪರಿಗಣಿತವಾದ ಅನುಭವ ಶ್ರೀಮಂತಿಕೆಯನ್ನು ಪ್ರಕಟಿಸುತ್ತದೆ. ಯಾವುದೇ ಮಹಾಕಾವ್ಯ ಅಂದಂದಿನ ಯುಗಧರ್ಮದ ಪ್ರತೀಕಗಳೇ ಆಗುತ್ತದೆ. ಒಂದು ನಿರ್ದಿಷ್ಟ ಕಾಲದ **"ಸಮಷ್ಟಿ ಪ್ರಜ್ಞೆ"**ಯನ್ನು (Collective Unconscious) ಮಹಾಕಾವ್ಯಗಳಲ್ಲಿ ಕಾಣಬಹುದು.

## ಮಹಾಕಾವ್ಯದ ನಾಯಕ ಲಕ್ಷಣ:

ಮಹಾಕಾವ್ಯದ ವಸ್ತು ಉದಾತ್ತ ವ್ಯಕ್ತಿಗಳ ಚಾರಿತ್ರವನ್ನು ಕುರಿತದ್ದಾಗಿದೆ. ದಂಡಿಯು ತನ್ನ ಕಾವ್ಯಾದರ್ಶದಲ್ಲಿ ಮಹಾಕಾವ್ಯದ ನಾಯಕ "ಚತುರನೂ ಉದಾತ್ತನೂ ಆಗಿರಬೇಕೆ"ಂದಿದ್ದಾನೆ. ಸಾಮಾನ್ಯವಾಗಿ ಭಾರತೀಯ ಲಾಕ್ಷಣಿಕರು ಮಹಾಕಾವ್ಯದ ನಾಯಕನ ಬಗ್ಗೆ ಹೇಳುವುದೇನೆಂದರೆ: ನಾಯಕನು ಒಳ್ಳೆಯ ವಂಶದಲ್ಲಿ ಹುಟ್ಟಿರಬೇಕು; ಮಹಾ ಪುರುಷನಾಗಿರಬೇಕು; ಚತುರೋದಾತ್ತನಾಗಿರಬೇಕು; ಧೀರೋದಾತ್ತನಾಗಿರಬೇಕು. ಇಂಥ ಉದಾತ್ತ ವ್ಯಕ್ತಿಗಳನ್ನೇ ತಮ್ಮ ಕಾವ್ಯಗಳಿಗೆ ನಾಯಕರನ್ನಾಗಿ ಮಾಡಿಕೊಂಡು ಚಿತ್ರಿಸುವುದೆಂದರೆ ಕವಿಗಳಿಗೆ ಆಸಕ್ತಿ.

ಮಹಾಕಾವ್ಯದ ನಾಯಕನ ಜನನ ವೃತ್ತಾಂತವೇ ವಿಶೇಷತೆಯಿಂದ ಕೂಡಿರುತ್ತದೆ. ಶ್ರೀರಾಮನ ಜನನ, ಕ್ರತು ದೇವತೆ ಕೊಟ್ಟ ಪಾಯಸವನ್ನು ಕೌಸಲ್ಯೆ ಸೇವಿಸಿದ್ದರಿಂದ ಆಗುತ್ತದೆ; ಅರ್ಜುನ, ಇಂದ್ರನ ಅಂಶದಿಂದ ಕುಂತಿಯಲ್ಲಿ ಜನಿಸಿದ; ಕರ್ಣ ಸೂರ್ಯನ ಅಂಶದಿಂದ ಜನಿಸಿದ. –ಹೀಗೆ ಮಹಾಕಾವ್ಯದ ನಾಯಕರು, ದೇವರ ಕೃಪೆಯಿಂದಲೋ ಅಥವಾ ಆಯಾ ದೇವ–ದೇವತೆಗಳ ಅಂಶವಾಗಿಯೋ, ಒಟ್ಟಿನಲ್ಲಿ ಒಂದಾನೊಂದು ಕಾರಣಪುರುಷರಾಗಿ – ಎಂದರೆ ಯಾವುದೋ ಒಂದು ಘನವಾದ ಉದ್ದೇಶದ ಸಾಧನೆಗಾಗಿ ಜನಿಸಿದವರು. ಅವರ ಸಾಮರ್ಥ್ಯಗಳನ್ನು ಹೊಗಳುವಾಗ ಕವಿಗಳು ಸೃಷ್ಟಿಯ ಸಮಸ್ತ ಶಕ್ತಿ–ಸತ್ವಗಳನ್ನು ಮೇಳಯಿಸಿ ಹೋಲಿಸುವುದುಂಟು. ತೇಜಸ್ಸಿನಲ್ಲಿ ಸೂರ್ಯ, ರೂಪದಲ್ಲಿ ಮನ್ಮಥ, ಶಾಂತಿಯಲ್ಲಿ ಚಂದ್ರ, ದೃಢತೆಯಲ್ಲಿ ಮೇರು, ಕ್ಷಮೆಯಲ್ಲಿ ಧರಿತ್ರಿ, ಗಾಂಭೀರ್ಯದಲ್ಲಿ ಸಮುದ್ರ – ಇತ್ಯಾದಿಯಾಗಿ ಕವಿಗಳು ನಾಯಕರನ್ನು ವರ್ಣಿಸುವ ಧಾಟಿಯಲ್ಲಿ ಇದನ್ನು ಗುರುತಿಸಬಹುದು. ಆ ನಾಯಕರುಗಳಿಗೆ ಆಯುಧ ವಿಶೇಷಗಳೂ, ವಾಹನ ವಿಶೇಷಗಳೂ ಬಂದೊದಗುತ್ತವೆ. ಶ್ರೀರಾಮನ ಕೋದಂಡ, ಶ್ರೀ ಕೃಷ್ಣನ ಚಕ್ರ, ಕಾದಂಬರಿ ಕಾವ್ಯದ ಚಂದ್ರಾಪೀಡನಿಗೆ ಇಂದ್ರಾಯುಧವೆಂಬ ಕುದುರೆ – ಇವು ಅವರಿಗೆ ವಿಶೇಷ ವರ್ಚಸ್ಸನ್ನು ತಂದುಕೊಡುತ್ತವೆ. ಮಹಾಕಾವ್ಯದ ನಾಯಕರು ಸದ್ವಂಶ ಸಂಜಾತರಾಗಿದ್ದು ತಮ್ಮ ವಂಶದ ಪ್ರತಿಷ್ಠೆಗೆ ಚ್ಯುತಿಬಾರದಂತೆ ನಡೆದುಕೊಳ್ಳಬೇಕೆಂದು ತೀರ್ಮಾನಿಸಿರುತ್ತಾರೆ. ತಮ್ಮಲ್ಲಿನ ಧೈರ್ಯ, ಶೌರ್ಯ, ಸತ್ಯ ಸಂಧತೆ, ಧರ್ಮಪರತೆ ಮೊದಲಾದ

ಗುಣಗಳು ತಮ್ಮ ವಂಶದ ಕೊಡುಗೆಯೆಂದೇ ಅವರು ಭಾವಿಸುತ್ತಾರೆ. ನಾಯಕ ಕೇವಲ ಧೀರೋದಾತ್ತನಾಗಿದ್ದರೆ ಸಾಲದು; ಆತ ಚತುರೋದಾತ್ತನೂ ಆಗಿರಬೇಕಾಗುತ್ತದೆ. **"ಚತುರನೆಂದರೆ ವಿದಗ್ಧ, ಕುಶಲ, ವ್ಯವಹಾರ ಕುಶಲ; ಉದಾತ್ತನೆಂದರೆ ಶೌರ್ಯ-ತ್ಯಾಗಾದಿ ಗುಣಯುಕ್ತ, ಉದಾರ, ವಂಶ ವೀರ್ಯಾದಿಗಳಿಂದ ಪ್ರಥಿತ, ಮಹಿಮಾನ್ವಿತ, ಧೀರೋದಾತ್ತ – ಎಂಬುದು ಸಾಮಾನ್ಯಾಭಿಪ್ರಾಯ"** ಎಂದು **ಟಿ.ವಿ ವೆಂಕಟಾಚಲಶಾಸ್ತ್ರಿಯವರು** ಹೇಳುತ್ತಾರೆ.*೪

ನಮ್ಮ ಲಾಕ್ಷಣಿಕರು, ಪ್ರತಿ ನಾಯಕನ ಲಕ್ಷಣವನ್ನೂ ಹೇಳುತ್ತಾರೆ. ಪ್ರತಿನಾಯಕ, ಖಳನಾಯಕ ಅಲ್ಲ, ಪ್ರತಿನಾಯಕ, ನಾಯಕನಿಗೆ ತಕ್ಕ ಪ್ರತಿಸ್ಪರ್ಧಿಯಾಗಿರಬೇಕು. ಆತ ಶೂರನೂ ದಿಗ್ವಿಜಯಿಯೂ ಅಗಿರಬೇಕು. ಇಂಥ ಬಲಿಷ್ಠ ಪ್ರತಿನಾಯಕನನ್ನೇ ನಾಯಕ ಸೋಲಿಸಿದಾಗ ಆತನ ಪ್ರತಿಷ್ಠೆ ಹೆಚ್ಚಾಗುತ್ತದೆ. ಮಹಾಕಾವ್ಯದಲ್ಲಿ ಪ್ರತಿನಾಯಕನಿಗಿಂತಲೂ, ನಾಯಕನೇ ಉದ್ದಕ್ಕೂ ಪ್ರಧಾನನಾಗಿರುವಂತೆ ಚಿತ್ರಿಸಬೇಕೆಂದು ಲಾಕ್ಷಣಿಕರು ಹೇಳುತ್ತಾರೆ. ನಾಯಕನಿಗೆ ತಾತ್ಕಾಲಿಕ ಹಿನ್ನಡೆ ಉಂಟಾಗಬಹುದು; ಆದರೆ ಯಾವುದೇ ಕಾರಣಕ್ಕೂ ನಾಯಕನ ಸೋಲು ಅಥವಾ ಸಾವನ್ನು ಮಹಾಕಾವ್ಯದಲ್ಲಿ ವರ್ಣಿಸಬಾರದು. ಅದರ ಬದಲಿಗೆ ಪ್ರತಿನಾಯಕನ ಸೋಲು ಅಥವಾ ಸಾವನ್ನು ವರ್ಣಿಸಬೇಕು. ಏಕೆಂದರೆ ನಾಯಕನೆಂದರೆ ನಮ್ಮೆಲ್ಲರ ಆಸೆ, ಹಾರೈಕೆ, ಆದರ್ಶಗಳ ಸಂಕೇತ. ಅವನ ಗೆಲುವು ಎಲ್ಲ ಆದರ್ಶಗಳ ಗೆಲುವಾಗುವುದರಿಂದ ಅವನ ಗೆಲುವೇ ಇಲ್ಲಿ ಮುಖ್ಯವಾಗುತ್ತದೆ.

**ಮಹಾಕಾವ್ಯ ಶರೀರ:**

ಮಹಾಕಾವ್ಯದ ಆರಂಭ **ದೇವತಾ ಸ್ತುತಿ**ಯಿಂದಾಗುತ್ತದೆ. ಪಂಪ, ಕುಮಾರವ್ಯಾಸರು ಪ್ರಾರ್ಥನೆಯಿಂದ ಕಾವ್ಯಾರಂಭ ಮಾಡುತ್ತಾರೆ. ತಮ್ಮ ಇಷ್ಟ ದೈವಗಳನ್ನೂ, **ಕಾವ್ಯಾಧಿದೇವತೆ**ಯಾದ **ಸರಸ್ವತಿ**ಯನ್ನು ಪ್ರಾರ್ಥಿಸಿ ಕಾವ್ಯ ನಿರ್ವಿಘ್ನವಾಗಿ ಸಾಗಲಿ ಎಂದು ಭಿನ್ನವಿಸಿಕೊಳ್ಳುತ್ತಾರೆ. ಪಾಶ್ಚಾತ್ಯ ಮಹಾಕಾವ್ಯಗಳಲ್ಲಿ ಈ ಪ್ರಾರ್ಥನೆ ಕಾವ್ಯಧ ಮಧ್ಯ ಮಧ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಉದಾ.: ಮಿಲ್ಟನ್ನನ **ಪ್ಯಾರಡೈಸ್ ಲಾಸ್ಟ್**. ಆದಿಮ ಮಹಾಕಾವ್ಯಗಳ ಕಥೆ ನೇರವಾಗಿದ್ದು, ಸುತ್ತು ಬಳಸಿಲ್ಲದೆ ಹರಿದು ಹೋಗುತ್ತದೆ. ಆದರೆ **ಆನಂತರದ ಮಹಾಕಾವ್ಯಗಳು** (Later Epic) ತಂತ್ರ ಕೌಶಲ್ಯದ ಕಡೆಗೆ, ಪಾಂಡಿತ್ಯದ ಕಡೆಗೆ ಗಮನ ಕೊಡುತ್ತವೆ. ಪಂಪ **'ಸಮಸ್ತ ಭಾರತ'** ಎನ್ನುವುದು; ರನ್ನನ **'ಸಿಂಹಾವಲೋಕನ ಕ್ರಮ'** ಇದಕ್ಕೆ ಉದಾಹರಣೆಗಳು.

ಮಹಾಕಾವ್ಯದಲ್ಲಿ **ಯುದ್ಧಗಳು** ಪ್ರಧಾನವಾದ ಒಂದು ಲಕ್ಷಣವಾಗಿದೆ. ನಾಯಕ ತನ್ನ ಆತ್ಮ ಗೌರವಕ್ಕಾಗಿಯೋ, ತಾನು ನಂಬಿದ ಮೌಲ್ಯಗಳಿಗಾಗಿಯೋ, ದುಷ್ಟರನ್ನು ನಿಗ್ರಹಿಸಿ ಲೋಕ ಕಲ್ಯಾಣ ಮಾಡುವುದಕ್ಕಾಗಿಯೋ ಆತ ರಣರಂಗವನ್ನು ಆಶ್ರಯಿಸಲೇ ಬೇಕಾಗುತ್ತದೆ. ನಾಯಕನ ಧೀರೋದಾತ್ತತೆ ಈ ಯುದ್ಧಗಳಿಂದಲೇ ಸಾಬೀತಾಗುತ್ತದೆ. ನಾಯಕ ಯುದ್ಧ ಮಾಡುವಾಗ, ಆಗಸದಲ್ಲಿ ದೇವತೆಗಳಿಂದ ಹಾರೈಕೆ ಬರುವ ಸಂಗತಿ ವರ್ಣಿತವಾಗಿರುತ್ತದೆ. ಯುದ್ಧದಲ್ಲಿ ವೀರ

ಸೋತರೆ ದುರಂತವಾಗುವುದಿಲ್ಲ. ಬದಲಾಗಿ ಆತ ಮತ್ತಷ್ಟು ಉದಾತ್ತವಾಗುತ್ತಾನೆ. ಯುದ್ಧದಲ್ಲಿ ಹೋರಾಡಿ ಸೋತರೆ ಸ್ವರ್ಗ, ಬದುಕಿದ್ದರೆ ಈ ಲೋಕದ ಭೋಗ ವೀರನಾದವನಿಗೆ ಇದ್ದೇ ಇರುತ್ತದೆಂದು ನಂಬಲಾಗುತ್ತದೆ. ನಾಯಕನ ಅಲೌಕಿಕ ಸಾಮರ್ಥ್ಯಗಳು ಮಹಾಕಾವ್ಯದಲ್ಲಿ ಚಿತ್ರಿತವಾಗುತ್ತವೆ. ಆತ ಅಸಾಧಾರಣ ಪುರುಷನಾದ್ದರಿಂದ ನಂಬುವುದಕ್ಕೆ ಸಾಧ್ಯವಿಲ್ಲದ ಸಾಹಸಗಳ ಸರಮಾಲೆಯನ್ನೇ ಮಾಡಿ ತೋರಿಸುತ್ತಾನೆ. ಕುಲ ಪರ್ವತವನ್ನು ನಡುಗಿಸುವುದು; ಕಡಲನ್ನೇ ಕಲಕುವುದು; ಬಾಣದಿಂದ ದಿಕ್ಕುಗಳನ್ನೇ ಸುಡುವುದು; – ಹೀಗೆ ಹಲವಾರು ಸಾಹಸಗಳನ್ನು ನಾಯಕ ಮಾಡಬಲ್ಲವನಾಗಿರುತ್ತಾನೆ. ಆಂಜನೇಯನ **'ಸಾಗರೋಲ್ಲಂಘನ'**, ಶ್ರೀ ಕೃಷ್ಣನ **'ವಿಶ್ವರೂಪದರ್ಶನ'** ಉತ್ತಮ ಉದಾಹರಣೆಗಳಾಗಿವೆ.

**ಪ್ರಯಾಣ**(Voyage) ಎನ್ನುವುದು ಮಹಾಕಾವ್ಯದ ಪ್ರಮುಖ ಆಶಯವಾಗಿ ಕಾಣಿಸಿಕೊಳ್ಳುತ್ತದೆ. ಮಹಾಕಾವ್ಯದ ನಾಯಕರು ಅಲೆಮಾರಿ ಜನಾಂಗದವರಂತೆ ಒಂದು ನಾಡಿನಿಂದ ಮತ್ತೊಂದಕ್ಕೆ ಸಂಚರಿಸುತ್ತಾರೆ. ಈ ಸಂಚಾರದ ನೆಪದಲ್ಲಿ ಕವಿ, ಅವರ ಧೈರ್ಯ, ಸಾಹಸಗಳನ್ನು, ದಾರಿಯುದ್ದಕ್ಕೂ ಕಂಡು ಬರುವ ನಿಸರ್ಗ ಸೌಂದರ್ಯವನ್ನೂ ವರ್ಣಿಸುತ್ತಾನೆ. ವಿವಿಧ ದೇಶದ, ವಿವಿಧ ಜನಗಳ ನಡವಳಿಕೆಯನ್ನು, ಸ್ವಭಾವಗಳನ್ನು ಕವಿ ಪರಿಚಯ ಮಾಡಿಕೊಡಲು ಈ ವಿಧಾನ ಅನುಕೂಲವಾಗಿದೆ. ರಾಮಾಯಣದಲ್ಲಿ ರಾಮ–ಲಕ್ಷ್ಮಣ–ಸೀತೆಯರು, ಮಹಾಭಾರತದಲ್ಲಿ ಪಾಂಡವರು, ವನವಾಸ ಕಾರಣಕ್ಕಾಗಿ ಅಲೆಯುತ್ತಾರೆ.

ಮಹಾಕಾವ್ಯ ಮೂಲತಃ ವರ್ಣನಾ ಪ್ರಧಾನವಾದುದಾಗಿರುತ್ತದೆ. ನಾಯಕ–ನಾಯಕಿಯರ ಅಡಿಯಿಂದ ಮುಡಿಯವರೆಗಿನ ವರ್ಣನೆ ಇರುತ್ತದೆ. ಮಹಾಕಾವ್ಯದ ಹರವು ವಿಸ್ತಾರವಾದದ್ದರಿಂದ ಕವಿ ಸಣ್ಣ ಪುಟ್ಟ ಸಂಗತಿಗಳನ್ನು ವರ್ಣನೆಗೆ ಬಳಸಿಕೊಳ್ಳುತ್ತಾನೆ. ಉದಾತ್ತ ವ್ಯಕ್ತಿಗಳ, ರಾಜಾಸ್ಥಾನಗಳ ವರ್ಣನೆ ಇರುತ್ತದೆ. ಒಂದೊಂದು ಪಾತ್ರವನ್ನೂ, ಒಂದೊಂದು ಘಟನೆಯನ್ನೂ, ಒಂದೊಂದು ಸನ್ನಿವೇಶವನ್ನೂ ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತದೆ. ಮಾನವ ಸ್ವಭಾವದ ಪದರು ಪದರುಗಳ ಪರಿಚಯ ಮಾಡಿಸುತ್ತದೆ.

**'ಅಷ್ಟಾದಶ ವರ್ಣನೆ'** ಎನ್ನುವುದು ಭಾರತೀಯ ಮಹಾಕಾವ್ಯಕ್ಕೆ ದಾಕ್ಷಿಣಾತ್ಯರ ಕೊಡುಗೆ ಎನ್ನಬಹುದು. ದಂಡಿ ಎನ್ನುವ ಅಲಂಕಾರಿಕ ಅಷ್ಟಾದಶ ವರ್ಣನೆಗಳು ಯಾವುವು ಎಂಬುದರ ಬಗ್ಗೆ ಒಂದು ಪಟ್ಟಿಯನ್ನೇ ಕೊಟ್ಟಿದ್ದಾನೆ: **"ನಗರ, ಆರ್ಣವ, ಶೈಲ, ಋತು, ಚಂದ್ರೋದಯ, ಸೂರ್ಯೋದಯ, ವನ ವಿಹಾರ, ಜಲಕ್ರೀಡೆ, ಮಧುಪಾನ ವಿನೋದ, ಸುರತೋತ್ಸವ, ವಿಯೋಗ, ವಿವಾಹ, ಕುಮಾರ ಜನನ, ಮಂತ್ರಾಲೋಚನೆ, ದೂತಕಾರ್ಯ, ವಿಜಯ ಯಾತ್ರೆ, ಯುದ್ಧ, ನಾಯಕನ ವಿಜಯ",** – ಇವು ಆ ಹದಿನೆಂಟು ವರ್ಣನೆಗಳೆನಿಸಿವೆ.

ಮಹಾಕಾವ್ಯದಲ್ಲಿ ಕಾವ್ಯ ಪ್ರಯೋಜನಗಳ ಉಲ್ಲೇಖ, ಸತ್ಕವಿ ಪ್ರಶಂಸೆ ಕುಕವಿ ನಿಂದನೆಗಳನ್ನು ಕಾಣಬಹುದು. ಕಾವ್ಯಾಸ್ವಾದನೆಯಿಂದ **ಧರ್ಮ–ಅರ್ಥ–ಕಾಮ–ಮೋಕ್ಷ**ಗಳ

ಪುರುಷಾರ್ಥ ಸಾಧನೆಯಾಗುತ್ತದೆಂದು ಕವಿಗಳು ತಿಳಿಸಿದ್ದಾರೆ. ಕಾವ್ಯದ ಪರಮ ಪ್ರಯೋಜನ **'ರಸಾನುಭವ'** ಎಂದು ನಮ್ಮ ಅಲಂಕಾರಿಕರು ಹೇಳಿದ್ದಾರೆ. ಕೆಲವು ಕವಿಗಳಂತೂ ಮೋಕ್ಷವೇ ಕಾವ್ಯದ ಪ್ರಥಮ ಪ್ರಯೋಜನವೆಂದು ಹೇಳುತ್ತಾರೆ. ಇಷ್ಟಾರ್ಥ ಪ್ರಾಪ್ತಿಗಾಗಿ, ಪಾಪದ ಕಳೆಯುವಿಕೆಗಾಗಿ ಕಾವ್ಯಾಸ್ವಾದನೆ ಉಪಯುಕ್ತವಾಗುತ್ತದೆನ್ನುವ ವಿಷಯ ಕೂಡ ಚರ್ಚಿತವಾಗಿದೆ. ಒಳ್ಳೆಯ ಕವಿಗಳ ಪ್ರಶಂಸೆ, ಕೆಟ್ಟ ಕವಿಗಳನ್ನು ಕುರಿತ ಟೀಕೆ ಕೂಡ ವರ್ಣಿಸಲ್ಪಡುತ್ತದೆ. ಇದರಿಂದ ಸಮಕಾಲೀನ ಕಾವ್ಯ ಧೋರಣೆಗಳ ತಿಕ್ಕಾಟವನ್ನೂ, ಕವಿ–ಕಾವ್ಯ ವಿಮರ್ಶೆಯನ್ನೂ ಅರ್ಥಮಾಡಿಕೊಳ್ಳಬಹುದಾಗಿದೆ.

ಮಹಾಕಾವ್ಯದ ಛಂದಸ್ಸು ಪ್ರೌಢವೂ ಗಂಭೀರವೂ ಆದುದಾಗಿರಬೇಕಾಗುತ್ತದೆ. ಅದರ ಹಾಸು–ಬೀಸುಗಳು ಮಹಾಕಾವ್ಯದ ವಸ್ತುವಿಗೆ ಅನುಗುಣವಾಗಿರಬೇಕಾಗುತ್ತದೆ. ಅದಲ್ಲದೆ ತೀರ ಸರಳವಾದ ರೀತಿಯಲ್ಲಿ ಬರೆದರೆ ಕಾವ್ಯ ದುರ್ಬಲ ಎನಿಸಿಕೊಂಡು ಬಿಡುತ್ತದೆ. ಛಂದಸ್ಸಿನಲ್ಲಿಯೂ ಅರ್ಥಮಯತೆ ಮತ್ತು ನಾದಮಯತೆಗಳನ್ನು ತರಲು ಸಾಧ್ಯ. ಕುವೆಂಪು, ಮಿಲ್ಟನ್ ಕವಿಯಂತೆ **'ಮಹಾ ಛಂದಸ್ಸು'** ರೂಪಿಸಿ **'ಶ್ರೀರಾಮಾಯಣ ದರ್ಶನಂ'** ಕೃತಿ ರಚಿಸಿದ್ದಾರೆ.

ಮಹಾಕಾವ್ಯದ ಭಾಷೆಯ ಸ್ವರೂಪವನ್ನು ಕುರಿತು ಸಹ ನಮ್ಮ ಲಾಕ್ಷಣಿಕರು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ. ಮಹಾಕಾವ್ಯದ ಭಾಷೆ ಅಗ್ರಾಮ್ಯವಾಗಿರಬೇಕು; ಅಕ್ಲಿಷ್ಟವಾಗಿರಬೇಕು; ಅಲಂಕಾರಗಳಿಂದ ಕೂಡಿರಬೇಕು; ಅಶ್ಲೀಲಾರ್ಥಗಳಿಗೆ ಎಡೆಗೊಡುವಂತಿರಬಾರದು. ಸುಶ್ಲಿಷ್ಟವಾದ ಪದ ವಿನ್ಯಾಸದಿಂದ ಕೂಡಿರಬೇಕೆಂಬುದು ಅವರ ತಿಳುವಳಿಕೆಯಾಗಿದೆ. ಪಂಪ ಕವಿಯ **ದೇಸಿ–ಮಾರ್ಗಗಳ ಬೆಸುಗೆ**, ಕುಮಾರವ್ಯಾಸ ಕವಿಯ **'ಕಲಿಯದವರಿಗೂ ಕಾಮಧೇನು'** ಎನಿಸುವ ಜನ ಭಾಷೆಯನ್ನು ಬಳಸಿರುವುದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಕಾವ್ಯದ ಭಾಷೆ, ಲೋಕದ ಭಾಷೆ, ಶಾಸ್ತ್ರದ ಭಾಷೆಗಿಂತ ಭಿನ್ನವಾಗಿರುತ್ತದೆ. ಅದು **'ಸಾಲಂಕೃತ'** ಭಾಷೆಯಾಗಿದ್ದು, ಉಪಮೆ, ರೂಪಕ ಮೊದಲಾದ ಅಲಂಕಾರಗಳನ್ನು ಒಳಗೊಂಡಿರುತ್ತದೆ. **'ಮಹೋಪಮೆ'** ಎಂಬುದು ಪಾಶ್ಚಾತ್ಯ ಮಹಾಕಾವ್ಯಗಳಲ್ಲಿ ಕಂಡು ಬರುವ ಅಭಿವ್ಯಕ್ತಿ ವಿಶೇಷವಾಗಿದೆ. ಇದನ್ನು ಮೊಟ್ಟ ಮೊದಲು ಕನ್ನಡ ಕಾವ್ಯಗಳಲ್ಲಿ ಬಳಕೆಗೆ ತಂದವರು – ಕುವೆಂಪು. **"ಮಹಾಕಾವ್ಯಗಳಿಗೆ ಮಾತ್ರ ಮಹೋಪಮೆ, ಒಪ್ಪುತ್ತದೆ..... ಮಹಾಕಾವ್ಯದ ಬೃಹತ್ ವಿಸ್ತೀರ್ಣದಲ್ಲಿ ಮಹೋಪಮೆಗೆ ಮನೋಹರತೆ ಬರುತ್ತದೆ"** [*೫] ಎಂದು **ಕುವೆಂಪು** ಭಾವಿಸುತ್ತಾರೆ.

## *ಟಿಪ್ಪಣಿಗಳು*

೦೧. ಡಾ.ಜಿ.ಎಸ್.ಎಸ್ ಶಿವರುದ್ರಪ್ಪ – **"ಮಹಾಕಾವ್ಯ ಸ್ವರೂಪ"** – ಪುಟ.೧

೦೨. ಜಿ.ಎಸ್. ಭಟ್ಟ – ಸಂ. **"ಮಹಾಕಾವ್ಯ ಒಂದು ಅವಲೋಕನ"**

- ಡಾ.ಹೆಚ್.ತಿಪ್ಪೇರುದ್ರಸ್ವಾಮಿಯವರ **"ಮಹಾಕಾವ್ಯ ಸ್ವರೂಪ"** ಲೇಖನ, ಪುಟ.೫೬

೦೩. ಎನ್.ಬಾಲಸುಬ್ರಹ್ಮಣ್ಯ – **"ಅರಿಸ್ಟಾಟಲನ ಕಾವ್ಯ ಮೀಮಾಂಸೆ"** – ಪುಟ ೭೨

೦೪. ಟಿ.ವಿ.ವೆಂಕಟಾಚಲ ಶಾಸ್ತ್ರಿ – **"ಮಹಾಕಾವ್ಯ ಲಕ್ಷಣ"** – ಪುಟ.೫

೦೫. ಕುವೆಂಪು – **"ತಪೋನಂದನ"** – ಪುಟ ೭೧.

# ಕವಿಯ ಜೀವನ ಮತ್ತು ಕಾವ್ಯ ಪ್ರೇರಣೆ

ಸಿ.ಹನುಮೇಗೌಡರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಕನಸವಾಡಿ ಹೋಬಳಿ, ನರಸಯ್ಯನ ಅಗ್ರಹಾರದಲ್ಲಿ ೦೬ನೇ ಆಗಸ್ಟ್ ೧೯೩೦ರಲ್ಲಿ ಜನಿಸಿದರು. ನಾಲ್ಕು ವರ್ಷದ ಹುಡುಗನಾಗಿದ್ದಾಗಲೇ ತಂದೆ ಚಿಕ್ಕ ತಿಮ್ಮಯ್ಯನವರು ದಿವಂಗತರಾದರು. ತಾಯಿ ಚಿಕ್ಕ ಹನುಮಕ್ಕನವರ ಆಶ್ರಯದಲ್ಲೇ ಬೆಳೆದ ಇವರಿಗೆ ದೊಡ್ಡಮ್ಮ, ಸೋದರತ್ತೆಯವರುಗಳ ಬೆಂಬಲವಿತ್ತು. ಈ ಮೂವರು ಮಾತೆಯರೂ ಗೌಡರ ಶಿಕ್ಷಣ ವಿಚಾರದಲ್ಲಿ ವಿಶೇಷ ಆಸಕ್ತಿ ವಹಿಸಿದ್ದರು. ಶಾಲೆಯ ಆರಂಭದ ದಿನಗಳನ್ನು ಅವರ ಊರಿನಲ್ಲಿಯೇ ಕಳೆದರು. ಪ್ರಾಥಮಿಕ ಶಿಕ್ಷಣದ ನಂತರ, ಪ್ರೌಢಶಿಕ್ಷಣ ಕೊಡಿಸಲು ಶ್ರೀಯುತರ ಸೋದರ ಮಾವನವರಾದ ಎನ್. ವೆಂಕಟಸ್ವಾಮಯ್ಯನವರು ಬೆಂಗಳೂರಿಗೆ ಕರೆದುಕೊಂಡು ಹೋಗಿ ಅಕ್ಕರೆಯಿಂದ ಶಿಕ್ಷಣ ಕೊಡಿಸಿದರು. ತಮ್ಮ ತಾಯಿಯ ತವರೂರಾದ ತಡಸಿಘಟ್ಟಕ್ಕೆ, ತ್ಯಾಮಗೊಂಡ್ಲು ಹತ್ತಿರವಿದ್ದುದರಿಂದ ಅಲ್ಲಿನ ಪ್ರೌಢಶಾಲೆಗೆ ಸೇರಿದರು. ಅಲ್ಲಿ ಗೌಡರ ಸ್ನೇಹಿತರೂ ಹಾಗೂ ಸಂಬಂಧಿಕರೂ ಆದ ಶ್ರೀ.ಕೆ.ರಾಮಯ್ಯನವರು ಸಹಪಾಠಿಯಾಗಿದ್ದು ಪ್ರತಿದಿನ ತಮ್ಮನ್ನು ಬೈಸಿಕಲ್ಲಿನ ಮೇಲೆ ಕೂರಿಸಿಕೊಂಡು ಶಾಲೆಗೆ ಹೋಗುತ್ತಿದ್ದರೆಂದು ಹನುಮೇಗೌಡರು ಬಾಲ್ಯದ ನೆನಪುಗಳನ್ನು ಹಂಚಿಕೊಳ್ಳುತ್ತಾರೆ.

೧೯೪೮ರಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಶ್ರೀಯುತರು ಉತ್ತೀರ್ಣರಾದರು. ನಂತರ ಮಾಧ್ಯಮಿಕ ಶಾಲೆಯ ಶಿಕ್ಷಕರಾದರು. ೧೯೫೪ರಲ್ಲಿ ಸೆಂಟ್ರಲ್ ಬೋರ್ಡ್ ಅಫ್ ಸೆಕೆಂಡರಿ ಎಜುಕೇಷನ್, ಅಜ್ಮೀರ್ ಮೂಲಕ ಇಂಟರ್ ಮೀಡಿಯಟ್ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ೧೯೫೮ರಲ್ಲಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ ನಡೆಸುತ್ತಿದ್ದ ರಾಷ್ಟ್ರ ಭಾಷಾ ವಿಶಾರದ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ೧೯೬೦ರಲ್ಲಿ ಅಲಿಘರ್ ಮುಸ್ಲಿಂ ವಿಶ್ವವಿದ್ಯಾನಿಲಯದಿಂದ ಬಿ.ಎ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ೧೯೬೫ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಮೂಲಕ ಬಿ.ಎಡ್ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ನಂತರ ಪ್ರೌಢಶಾಲಾ ಶಿಕ್ಷಕರಾದರು. ೧೯೬೬ರಲ್ಲಿ ಅಲಿಘರ್ ಮುಸ್ಲಿಂ ವಿಶ್ವವಿದ್ಯಾನಿಲಯ ನಡೆಸುವ ಎಂ.ಎ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ೧೯೬೯ರಲ್ಲಿ ಪಬ್ಲಿಕ್ ಸರ್ವಿಸ್ ಕಮಿಷನ್ ಶ್ರೀಯುತರನ್ನು ಕ್ಲಾಸ್-೧ ಪ್ರೊಬೇಷನರ್ ಆಗಿ ಆಯ್ಕೆ ಮಾಡಿತು. ಸರ್ಕಾರ ಶಿಕ್ಷಣಾಧಿಕಾರಿಯನ್ನಾಗಿ ನೇಮಕ ಮಾಡಿತು. ಸಹೋದರ ಶ್ರೀಚಿಕ್ಕತಿಮ್ಮಯ್ಯನವರು ಪದವಿ ಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದಾರೆ. ೧೯೫೬ರಲ್ಲಿ ರಾಜಮ್ಮ ಎಂಬುವವರ ಜೊತೆ ಗೌಡರ ವಿವಾಹವಾಯಿತು. ಎರಡು ಗಂಡು ಮತ್ತು ಒಂದು ಹೆಣ್ಣು, ಒಟ್ಟು ಮೂರು ಮಕ್ಕಳು ಗೌಡರಿಗಿದ್ದು, ಎಲ್ಲರೂ ಉತ್ತಮ ಶೈಕ್ಷಣಿಕ ಹಿನ್ನೆಲೆ ಉಳ್ಳವರಾಗಿದ್ದಾರೆ.

## ಶಿಕ್ಷಣ ಇಲಾಖೆಯಲ್ಲಿ ಹನುಮೇಗೌಡರ ಸಾಧನೆ:

೧೯೬೯ರಲ್ಲಿ ಪಬ್ಲಿಕ್ ಸರ್ವಿಸ್ ಕಮಿಷನ್ ಹನುಮೇಗೌಡರನ್ನು ಕ್ಲಾಸ್-೧ ಅಧಿಕಾರಿಯಾಗಿ ಆಯ್ಕೆ ಮಾಡಿದ ನಂತರ, ಶಿಕ್ಷಣಾಧಿಕಾರಿಯಾಗಿ ಚಿತ್ರದುರ್ಗದಲ್ಲಿ, ತುಮಕೂರಿನಲ್ಲಿ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಉಪನಿರ್ದೇಶಕರಾಗಿ ಜಿಲ್ಲಾ ಮಟ್ಟದಲ್ಲಿ ಕೆಲಸ ಮಾಡಿರುತ್ತಾರೆ. ನಂತರ ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಚೀಫ್ ಎಕ್ಸಿಕ್ಯೂಟೀವ್ ಅಧಿಕಾರಿಯಾಗಿ ಕೆಲಸ ಮಾಡಿದ್ದಾರೆ. ನಂತರ ಧಾರವಾಡಕ್ಕೆ ಉಪನಿರ್ದೇಶಕರನ್ನಾಗಿ ಸರ್ಕಾರ ವರ್ಗ ಮಾಡಿತು. ಅಲ್ಲಿ ಏಳು ಅಂಶಗಳ ಕಾರ್ಯಕ್ರಮವನ್ನು ಕೈಗೆತ್ತಿಕೊಂಡೂ ಬಹಳ ಉಪಯುಕ್ತ ಕೆಲಸ ಮಾಡಿದ್ದಾರೆ. ನಂತರ ಬಳ್ಳಾರಿಯಲ್ಲೂ ಕೆಲವು ಕಾಲ ಉಪನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.

ಸರ್ಕಾರ ಗೌಡರ ಪ್ರಾಮಾಣಿಕ ಕರ್ತವ್ಯ ನಿಷ್ಠೆಯನ್ನು ಗುರುತಿಸಿ, ಮಧ್ಯಾಹ್ನದ ಉಪಹಾರದ ಇಲಾಖೆಗೆ ಬಡ್ತಿ ನೀಡಿ ಸಹ ನಿರ್ದೇಶಕರನ್ನಾಗಿ ನೇಮಿಸಿತು. ನಂತರ ಪ್ರಾಥಮಿಕ ಶಿಕ್ಷಣದ ನಿರ್ದೇಶಕರನ್ನಾಗಿ ಸರ್ಕಾರ ಮತ್ತೆ ಬಡ್ತಿ ಕೊಟ್ಟು ನೇಮಕ ಮಾಡಿತು. ಧಾರವಾಡದಲ್ಲಿ ತೆಗೆದುಕೊಂಡ ಯೋಜನೆಗಳನ್ನೇ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದಾಗ, ಇಡೀ ರಾಜ್ಯದಲ್ಲಿರುವ ಎಲ್ಲಾ ಜಿಲ್ಲೆಗಳ ಪ್ರಾಥಮಿಕ ಶಾಲೆಗಳಲ್ಲಿ ಅನುಷ್ಠಾನಕ್ಕೆ ತಂದರು.

(೦೧) ಪ್ರಾಥಮಿಕ ಶಾಲೆಗಳ ಮಕ್ಕಳನ್ನು ಸೇರಿಸುವ ಯೋಜನೆ ತೆಗೆದುಕೊಳ್ಳುವುದಕ್ಕೆ ಮೊದಲು ರಾಜ್ಯಾದ್ಯಾಂತ ಐವತ್ತು ಸಾವಿರ ಮಕ್ಕಳಂತೆ ಪ್ರಾಥಮಿಕ ಶಾಲೆಯ ೧ನೇ ತರಗತಿಗೆ ಸೇರುತ್ತಿದ್ದರು. ಈ ಯೋಜನೆ ತೆಗೆದುಕೊಂಡ ನಂತರ ೨ ಲಕ್ಷ ಮಕ್ಕಳು, ಪ್ರತಿ ವರ್ಷ ೧ನೇ ತರಗತಿಗೆ ಸೇರಲು ಪ್ರಾರಂಭಿಸಿದರು.

(೦೨) ೪೦ ಲಕ್ಷ ಮಕ್ಕಳು ಪ್ರಾಥಮಿಕ ಶಾಲೆಯಲ್ಲಿ ತಪ್ಪಿಲ್ಲದಂತೆ ಓದುವುದರಲ್ಲಿ, ಬರೆಯುವುದರಲ್ಲಿ, ಲೆಕ್ಕ ಮಾಡುವುದರಲ್ಲಿ ಮತ್ತು ಇತರೆ ವಿಷಯಗಳಲ್ಲೂ ಉತ್ತಮವಾದ ಪ್ರಗತಿಯನ್ನು ತೋರಿಸಿದರು.

(೦೩) ೪೦ ಲಕ್ಷ ಮಕ್ಕಳು ಕನಿಷ್ಠ ದಿನಕ್ಕೊಂದು ಒಳ್ಳೆಯ ಕೆಲಸ ಮಾಡಿ ತಮ್ಮ ಡೈರಿಯಲ್ಲಿ ಬರೆಯುತ್ತಿದ್ದರು.

(೦೪) ಶಾಲಾ ಸಮುದಾಯ ಕಾರ್ಯಕ್ರಮದಲ್ಲಿ ಪ್ರತಿ ಶನಿವಾರ ಶಾಲಾ ಶಿಕ್ಷಕರ ಸ್ಕೂಲ್ ಕಾಂಪ್ಲೆಕ್ಸ್ ಕಾರ್ಯಕ್ರಮದಲ್ಲಿ ಸಂಬಂಧಿಸಿದ ಪ್ರೌಢಶಾಲೆಯಲ್ಲಿ ಒಂದೊಂದು ವಾರ, ಒಂದೊಂದು ವಿಷಯದ ಬಗ್ಗೆ ಅಲ್ಲಿಯ ಶಿಕ್ಷಕರು ತರಬೇತಿ ಕೊಡುತ್ತಿದ್ದರು.

(೦೫) ಎರಡೂವರೆ ಲಕ್ಷ ತೆಂಗಿನ ಸಸಿಗಳನ್ನು, ಎರಡುವರೆ ಲಕ್ಷ ಇತರೆ ಗಿಡಗಳನ್ನು ಶಾಲೆಯ ಖಾಲಿ ಜಾಗದಲ್ಲಿ ಆಟದ ಮೈದಾನಕ್ಕೆ ತೊಂದರೆಯಾಗದಂತೆ ಶಿಕ್ಷಕ, ಶಿಕ್ಷಕಿಯರು ನೆಡಿಸಿ, ಬೆಳೆಸಿ, ರಕ್ಷಿಸಿದರು. ಅವು ಇಂದು ಶಾಲೆಗೆ ಫಲ ಕೊಡುತ್ತಿವೆ.

(೦೬) ಶಾಲಾಭಿವೃದ್ಧಿ ಸಮಿತಿಯ ಕಾರ್ಯಕ್ರಮದಲ್ಲಿ ಸಂಬಂಧಿಸಿದ ಶಾಲಾಭಿವೃದ್ಧಿ ಸಮಿತಿಯ ಸದಸ್ಯರು, ಊರಿನ ದಾನಿಗಳು ಸಂಬಂಧಿಸಿದ ಅವರ ಶಾಲೆಗೆ ಅವಶ್ಯಕವಾಗಿ ಬೇಕಾಗಿರುವ ಕುರ್ಚಿಗಳು, ಮೇಜುಗಳು, ಬೆಂಚುಗಳು, ಕಪಾಟುಗಳು, ರೇಡಿಯೋ, ಊಟ ಮಾಡಲು ತಟ್ಟೆ, ಲೈಬ್ರರಿ ಪುಸ್ತಕಗಳು, ಲ್ಯಾಬ್ ಸಂಬಂಧಪಟ್ಟ ಸಾಮಗ್ರಿಗಳು, ಆಟಕ್ಕೆ ಸಂಬಂಧಿಸಿದ ಸಾಮಾನುಗಳು, ಇವುಗಳನ್ನು ಕೊಡಿಸುತ್ತಿದ್ದರು. ಹೀಗೆ ದಾನದ ರೂಪದಲ್ಲಿ ಬಂದ ವಸ್ತುಗಳನ್ನು ಸಂಬಂಧಿಸಿದ ಶಾಲೆಯ ಶಿಕ್ಷಕರು, ಸ್ಟಾಕ್ ರಿಜಿಸ್ಟರ್‌ನಲ್ಲಿ ತೆಗೆದುಕೊಳ್ಳುತ್ತಿದ್ದರು. ಈ ರೀತಿ ಶಾಲೆಗಳಿಗೆ ದಾನದ ರೂಪದಲ್ಲಿ ಬಂದ ವಸ್ತುಗಳ ಒಟ್ಟು ಮೊತ್ತ ಸುಮಾರು ಹದಿನೆಂಟುವರೆ ಕೋಟಿ ರೂಪಾಯಿಗಳಷ್ಟಿತ್ತು.

(೦೭) ಪಾಸ್ಟರ್ ಪೇರೆಂಟ್ಸ್ ಯೋಜನೆಯನ್ನು ಕೈಗೆತ್ತಿಕೊಂಡು ಶಾಲೆಯನ್ನು ಬಿಟ್ಟು ಬೇರೆಯವರ ಮನೆಯಲ್ಲಿ ಕೆಲಸ ಮಾಡುತ್ತಿದ್ದ ೩೬,೦೦೦ ಹೆಣ್ಣು ಮಕ್ಕಳನ್ನು ಮತ್ತೆ ಶಾಲೆಗೆ ಸೇರಿಸಲಾಯಿತು.

– ಈ ಯೋಜನೆಗಳನ್ನು ಹನುಮೇಗೌಡರು ಪ್ರಾಥಮಿಕ ಶಿಕ್ಷಣದ ನಿರ್ದೇಶಕರಾಗಿದ್ದಾಗ ಕೈಗೊಂಡು ರಾಜ್ಯಾದ್ಯಾಂತ ಯಶಸ್ವಿಗೊಳಿಸಿ ಮಾದರಿ ಅಧಿಕಾರಿ ಎನಿಸಿದ್ದಾರೆ.

ಪ್ರಾಥಮಿಕ ಶಿಕ್ಷಣದ ನಿರ್ದೇಶಕ ಹುದ್ದೆಯಿಂದ ೧೯೮೮ರಲ್ಲಿ ನಿವೃತ್ತರಾದ ಮೇಲೆ ಸರ್ಕಾರ ಏಕ ಸದಸ್ಯ ಸಮಿತಿಯ ಸದಸ್ಯರನ್ನಾಗಿ ಮಾಡಿಕೊಂಡಿತು. ಪ್ರಾಥಮಿಕ ಶಿಕ್ಷಣದ ಸುಧಾರಣೆಗೆ ಹಲವಾರು ಸಲಹೆಗಳನ್ನು ಗೌಡರು ಈ ಸಮಿತಿಯ ಮೂಲಕ ಸರ್ಕಾರಕ್ಕೆ ಒಪ್ಪಿಸಿದರು. ಸರ್ಕಾರ ಶ್ರೀಯುತರ ಸಲಹೆಗಳಲ್ಲಿ ಶೇ.೭೫ರಷ್ಟು ಅನುಷ್ಠಾನಕ್ಕೆ ತಂದಿತು. ಶಿಕ್ಷಕ ಶಿಕ್ಷಕಿಯರಿಗೆ ಉಪಯೋಗವಾಗಲು **'ಶಿಕ್ಷಣ ದರ್ಪಣ'** ಎನ್ನುವ ಕಿರುಹೊತ್ತಿಗೆಯನ್ನು ಬರೆದು ಶಿಕ್ಷಣ ಟ್ರಸ್ಟ್‌ಗೆ ಒಪ್ಪಿಸಿದ್ದಾರೆ. ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ನ ಆಡಳಿತಾಧಿಕಾರಿಯಾಗಿ ನೇಮಕಗೊಂಡ ಮೇಲೆ ಎಂಟು ವರ್ಷಗಳು ಶ್ರಮಿಸಿ **'ಇಂಗ್ಲೀಷ್ ಗ್ರಾಮರ್'** ಪುಸ್ತಕ ರಚಿಸಿ ಶ್ರೀಮಠಕ್ಕೆ ಅರ್ಪಿಸಿದ್ದಾರೆ. ಕರ್ಮಯೋಗಿಗಳು, ಧ್ಯಾನಾಸಕ್ತರು, ಪ್ರಾಣಿದಯೆಯುಳ್ಳವರೂ, ಜ್ಞಾನದ ಜ್ಯೋತಿಯನ್ನು ಮಕ್ಕಳ ಹಾಗೂ ತರುಣರ ಹೃನ್ಮನಗಳಲ್ಲಿ ಹಚ್ಚುತ್ತಿರುವ ವಿದ್ಯಾಭಿಮಾನಿಗಳೂ, ಜನಾನುರಾಗಿಗಳೂ ಆದ ಪೂಜ್ಯ ಜಗದ್ಗುರು ಶ್ರೀ ಬಾಲಗಂಗಾಧರನಾಥ ಸ್ವಾಮಿಗಳವರ ಕಾರ್ಯದಕ್ಷತೆಯಿಂದ

ಸ್ಫೂರ್ತಿಗೊಂಡು ಅವರ ಸಾಧನೆಗಳನ್ನು ಸ್ಥಿರಗೊಳಿಸುವ ಉದ್ದೇಶದಿಂದ ಸುಮಾರು ೧೭ ವರ್ಷಗಳ ಕಾಲ **"ಚುಂಚಾದ್ರಿ ಚಂದ್ರಿಕೆ"** ಮಹಾ ಕಾವ್ಯವನ್ನು ಹನುಮೇಗೌಡರು ರಚಿಸಿದ್ದಾರೆ.

ಹನುಮೇಗೌಡರು ಸುಮಾರು ೧೭ ವರ್ಷಗಳಿಂದ ಶ್ರೀಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ನ ಆಡಳಿತಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದು, ಶ್ರೀ ಮಠದ ಸಾತ್ವಿಕ ಪರಿಸರವೇ "ಚುಂಚಾದ್ರಿ ಚಂದ್ರಿಕೆ" ಮಹಾ ಕಾವ್ಯ ರಚನೆಗೆ ಪ್ರೇರಣೆ ನೀಡಿದೆ. ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ **ಕರ್ತವ್ಯ ನಿಷ್ಠೆ, ಪರೋಪಕಾರದ ಭಾವನೆ, ರೋಗಿಗಳ ರೋಗ ನಿವಾರಣೆಗೆ ತೆರೆದಿರುವ ಚಿಕಿತ್ಸಾಲಯಗಳ ವ್ಯವಸ್ಥೆ, ಬಾಲ ಬಾಲೆಯರ ಹಾಗೂ ಪ್ರೌಢರ ಶ್ರೇಯೋಭಿವೃದ್ಧಿಗೆ ಅವರು ಶಾಲಾ ಕಾಲೇಜುಗಳನ್ನು ಪ್ರಾರಂಭ ಮಾಡಿರುವ ಕೈಂಕರ್ಯ, ಅಂಗವಿಕಲರಿಗೆ ತೆರೆದಿರುವ ವಿಭಿನ್ನ ಶಾಲೆಗಳು, ದಿನ ನಿತ್ಯ ನಡೆಯುವ ಅನ್ನ ದಾಸೋಹ, ಭೈರವನ ಮೇಲಿರುವ ಅಪಾರ ಭಕ್ತಿ** – ಇವು ಹನುಮೇಗೌಡರನ್ನು ಸೆಳೆದ ಪ್ರಮುಖ ಅಂಶಗಳಾಗಿವೆ. ಅನೇಕ ಶತಮಾನಗಳಿಂದ ಗಾಢಾಂಧಕಾರದಲ್ಲಿ ಬಂಧಿತರಾಗಿದ್ದ ಈ ಮಠದ ಸಿದ್ಧರ, ನಾಥರ, ತತ್ವೋಪದೇಶಗಳನ್ನು ಬೆಳಕಿಗೆ ತರಬೇಕೆಂಬ ಉತ್ಕಟ ಇಚ್ಛೆ ಗೌಡರ ಮನದಲ್ಲಿ ಉದಿಸಿತು. ನಾಥ ಸಿದ್ಧರ ಧರ್ಮೋಪದೇಶಗಳನ್ನು ಜನರಿಗೆ ತಲುಪಿಸಬೇಕೆನಿಸಿತು. ಲಂಚ–ರುಷುವತ್ತು, ಕೊಲೆ – ಸುಲಿಗೆ, ಸ್ತ್ರೀಯರ ಮೇಲಿನ ಶೋಷಣೆ, ದುರ್ಬಲರಿಗೆ ಆಗುತ್ತಿರುವ ಅನ್ಯಾಯ ಇವು ಗೌಡರ ಮನಸ್ಸನ್ನು ಬಹಳಷ್ಟು ಕಲಕಿತ್ತು. ಉಪದೇಶದಿಂದ ಸಮಾಜವನ್ನು ತಿದ್ದಲು ಸಾಧ್ಯವಿಲ್ಲದಿದ್ದರೂ, ಎಷ್ಟೋ ಕಳ್ಳ ಕಾಕರೂ ತತ್ವೋಪದೇಶಗಳಿಂದ ಬದಲಾಗಿರುವ ಸಂಗತಿಯನ್ನು ಕೇಳಿದ್ದರು. ಹೀಗೆ ಸ್ಫೂರ್ತಿಗೊಂಡ ಗೌಡರು "ಚುಂಚಾದ್ರಿ ಚಂದ್ರಿಕೆ" ರಚನೆಗೆ ತೊಡಗಿದರು. "ಹಿಂದಿನ ಹಾಗೂ ಇಂದಿನ ಮಠಾಧಿಪತಿಗಳು, ಗುರುವರ್ಯರುಗಳು ನೀಡಿದ ಉಪದೇಶಗಳನ್ನು, ಸಾವಿರ ಜನರಲ್ಲಿ ನೂರು ಜನ ಓದಿ, ಹತ್ತು ಜನರು ಅರಿತು, ಒಬ್ಬ ಅವುಗಳಲ್ಲಿ ಒಂದನ್ನಾದರೂ ಅನುಷ್ಠಾನಕ್ಕೆ ತಂದರೂ ಸಂತೋಷವೇ ಎಂದು ಭಾವಿಸಿ ಪೂಜ್ಯ ಗುರುಗಳು ನೀಡಿರುವ ತತ್ವೋಪದೇಶಗಳಿಂದ ಕೂಡಿದ ಒಂದು ಕಾವ್ಯವನ್ನು ಶ್ರೀಮಠಕ್ಕೆ ಕಾಣಿಕೆಯಾಗಿ ಕೊಡಬೇಕೆಂದೆನಿಸಿತು" ಎಂದು ಹನುಮೇಗೌಡರು ತಮ್ಮ ಕಾವ್ಯ ರಚನೆಗೊದಗಿದ ಪ್ರೇರಣೆಯನ್ನು ಹೇಳಿಕೊಂಡಿದ್ದಾರೆ.

"ಆದರೆ ಕಾವ್ಯವನ್ನು ಬರೆಯುವುದು ನಮ್ಮಂಥವರ ಕೈಗೆಟುಕದ ಮರೀಚಿಕೆಯಂತಿತ್ತು. ಕಾಳಿದಾಸ, ಭವಭೂತಿ, ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಕುವೆಂಪು, ದ.ರಾ.ಬೇಂದ್ರೆ, ಡಿ.ವಿ.ಜಿ ಇವರುಗಳ ಆಸ್ತಿಯದು ನನಗೆ ದೊರಕದ ಮಂದಾರ ಪುಷ್ಪವದು ಎಂದು ಅರಿವಾಯಿತು. ಆದರೂ ಇದನ್ನು ಸಾಧಿಸಲೇ ಬೇಕೆಂದು ದೃಢ ಸಂಕಲ್ಪ ಮಾಡಿದೆ, ಧೃತಿಗೆಡಲಿಲ್ಲ. ಆದರೂ ಒಬ್ಬ ಮಾರ್ಗದರ್ಶಕರ ಅವಶ್ಯಕತೆಯಿತ್ತು. ಕಡತಗಳ ಸಾಮಾಜ್ಯದಿಂದ ಕಾವ್ಯದ ಸಾಮ್ರಾಜ್ಯಕ್ಕೆ ನನ್ನನ್ನು ತರಲು ಬಹುಶ್ರುತರ ನೆರವು ಅನಿವಾರ್ಯವಾಯಿತು. ಆಗ ಸಂಸ್ಕೃತದಲ್ಲಿ ಪಾಂಡಿತ್ಯ ಪಡೆದಿದ್ದ ಸನ್ಮಾನ್ಯ ಶ್ರೀ ಸಿದ್ಧಲಿಂಗಯ್ಯನವರು ಶ್ರೀಮಠದಲ್ಲಿಯೇ ಇದ್ದರು. ಒಂದು ಕಾವ್ಯ ಬರೆಯುವ

ಉದ್ದೇಶವನ್ನು ಅವರಿಗೆ ತಿಳಿಸಿದೆ. ಅವರು ನನ್ನ ಆಸೆ, ಆಕಾಂಕ್ಷೆಗಳಿಗೆ ಸ್ಪಂದಿಸಿದರು, ಪ್ರೋತ್ಸಾಹ ಕೊಟ್ಟರು. ಮರಳು ಕಾಡಿನಲ್ಲಿ ಪ್ರಯಾಣ ಮಾಡಿ ಬಾಯಾರಿದ ಯಾತ್ರಿಕನಿಗೆ ಓಯಸಿಸ್ ಸಿಕ್ಕಿದಂತಾಯಿತು" ಎಂದು ತಮ್ಮ ಕಾವ್ಯ ರಚನೆಗೆ ಒದಗಿದ ಸ್ಫೂರ್ತಿಯ ವಿಷಯವನ್ನು ಗೌಡರು ಪ್ರಸ್ತಾಪಿಸುತ್ತಾರೆ.

"ನಾನು ಕನ್ನಡ ಪಂಡಿತನಲ್ಲದುದರಿಂದ ಈ ಕಾವ್ಯ ರಚನೆ ನನ್ನಿಂದ ಸಾಧ್ಯವೇ?" ಎನ್ನುವ ಅನುಮಾನ ಗೌಡರನ್ನು ಮೊದಮೊದಲು ಬಾಧಿಸಿತು. ಆಗ ಸಿದ್ಧಗಂಗಯ್ಯನವರು " ಕನ್ನಡ ಪಂಡಿತರಲ್ಲದವರೂ ಕಾವ್ಯಗಳನ್ನು ಬರೆದಿದ್ದಾರೆ, ಇದಕ್ಕೆ ಅಗೋಚರವಾಗಿ ನಿಮ್ಮಲ್ಲಿಯೇ ಇರುವ ಅನುಭವ, ಉತ್ಸಾಹ, ಇಚ್ಛಾ ಮನೋಭಾವನೆ, ನಿಮಗೆ ನೆರವಾಗುತ್ತವೆ" ಎಂದು ಪ್ರೋತ್ಸಾಹಿಸಿದರು. ಇದರಿಂದ ಉತ್ತೇಜಿತರಾಗಿ ಅನೇಕ ಗ್ರಂಥಗಳನ್ನು ಅಧ್ಯಯನ ಮಾಡಿ ಅದರೊಳಗಿನ ವಿಚಾರಗಳನ್ನು ಮನನ ಮಾಡಿದರು. ಹಗಲೆಲ್ಲ ಶಾಲೆಗಳಿಗೆ ಭೇಟಿ ನೀಡಿ, ತಪಾಸಣೆ ಮಾಡಿ, ಶಿಕ್ಷಕರಿಗೆ ಮಾರ್ಗದರ್ಶನ ಮಾಡಿ ರಾತ್ರಿ ವೇಳೆಯಲ್ಲಿ ಕಾವ್ಯ ರಚನೆಯಲ್ಲಿ ಮಗ್ನರಾದರು.

“ಅರ್ಥ ಗರ್ಭಿತವಾದ ಜ್ಞಾನದ ಭಾವವೇ ಕಾವ್ಯದ ಆತ್ಮ. ಭಾವಧಾರೆ ಹರಿದಾಗ ಕಾವ್ಯಗಳು ಚೇತನದಾಯಕವಾಗುತ್ತವೆ. ಅಲಂಕಾರಗಳು, ಲಯ, ಛಂದಸ್ಸು, ಪ್ರಾಸ ಇವುಗಳು ಕಾವ್ಯವನ್ನು ಅಲಂಕರಿಸಲು ನೆರವಾಗುತ್ತವೆ. ಇವು ವ್ಯಕ್ತಿಯ ಆಭರಣಗಳಿದ್ದಂತೆ” ಎಂದು ಹೆಚ್.ಕೆ.ಸಿದ್ಧಗಂಗಯ್ಯನವರು ಆಗಾಗ್ಗೆ ಶ್ರೀಯುತರನ್ನು ಪ್ರೋತ್ಸಾಹಿಸುತ್ತಿದ್ದರು. ಇದನ್ನು ಕೇಳಿದಾಗ ಗೌಡರಿಗೆ ಕಾವ್ಯ ರಚನೆ ಕಷ್ಟಕರವೆನಿಸಿತು. ಆದರೆ "ಧೃತಿಗೆಡಬೇಡ, ಮನಸ್ಸಿನ ದೃಢ ಸಂಕಲ್ಪಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ" ಎಂದು ಮನಸ್ಸು ಮತ್ತೆ ಮತ್ತೆ ಹೇಳುತ್ತಿದ್ದುದರಿಂದ, ದೃಢ ಮನಸ್ಸಿನಿಂದ ಕಾವ್ಯ ರಚನೆಗೆ ಮುಂದಾದರು. ಕೆಲವು ತಿಂಗಳುಗಳ ನಂತರ ಕವನಗಳನ್ನು ಕಡೆಯುವ ಕಲೆ ಸ್ವಲ್ಪ ಸ್ವಲ್ಪವಾಗಿ ಮೈಗೂಡತೊಡಗಿತು. ಆ ದೃಢ ಸಂಕಲ್ಪದ ಪರಿಶ್ರಮದ ಶಿಶುವೇ **“ಚುಂಚಾದ್ರಿ ಚಂದ್ರಿಕೆ”** ಮಹಾಕಾವ್ಯವಾಗಿದೆ.

# ಕಾವ್ಯ ಪರಿಚಯ

**"ಚುಂಚಾದ್ರಿ ಚಂದ್ರಿಕೆ"** ಮಹಾಕಾವ್ಯ ಆಧ್ಯಾತ್ಮಿಕ ನೆಲೆಗಟ್ಟಿನ ಆಧಾರದ ಮೇಲೆ ನಿಂತಿದ್ದು, ಪೌರಾಣಿಕ ಹಾಗೂ ಐತಿಹಾಸಿಕ ವಿಚಾರಗಳ ಹಿನ್ನೆಲೆ ಪಡೆದಿದೆ. ಇದು ೩೪೭ ಪುಟಗಳ ೩ ಸಂಪುಟಗಳ ೨೪ ಸಂಚಿಕೆಗಳ ೨೦೭೮ ಕವನಗಳ ಆಕರ ಗ್ರಂಥವಾಗಿದೆ. ಬೃಹತ್ ಕಾವ್ಯವಾಗಿದೆ. **ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ** – ಈ ಕಾವ್ಯದ ಪ್ರಕಾಶನದ ಹೊಣೆ ಹೊತ್ತುಕೊಂಡಿದೆ.

**"ಚುಂಚಾದ್ರಿ ಚಂದ್ರಿಕೆ"** ಪೌರಾಣಿಕ, ಮೌಖಿಕ, ಸಾಮಾಜಿಕ ಹಾಗೂ ಚಾರಿತ್ರಿಕ ಹಿನ್ನೆಲೆಯ ಧಾರ್ಮಿಕ ಕಾವ್ಯವಾಗಿದೆ. ಈ ಸುದೀರ್ಘ ಕಾವ್ಯದಲ್ಲಿ ಮೂರು ಮುಖ್ಯ ರಸ ಘಟ್ಟಗಳಿವೆ. (೦೧) **ಶ್ರೀ ಆದಿಚುಂಚನಗಿರಿ ವರ್ಣನೆ (೦೨) ಅದರ ಗುರುಪರಂಪರೆ ಪರಿಚಯ (೦೩) ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ವಿಸ್ಮಯ ಸಾಧನೆ.** ಪ್ರತೀ ಹಂತದಲ್ಲೂ ಭಕ್ತಿ–ಗೌರವ–ಶ್ರದ್ಧೆಗಳು ಎದ್ದು ಕಾಣುತ್ತವೆ. ಹೆಜ್ಜೆ ಹೆಜ್ಜೆಗೂ ದೈವಿಕ ಪ್ರಜ್ಞೆ ವಿಜೃಂಭಿಸುತ್ತದೆ.

ಗಣಪತಿ–ಸರಸ್ವತಿ–ಮಾರುತಿ–ಹರಿಹರ–ಜಗದಾತ್ಮ, ಭೈರವರುಗಳ ಪ್ರಾರ್ಥನೆಯಿಂದ ಕಾವ್ಯ ಆರಂಭವಾಗುತ್ತದೆ. ದುಷ್ಟ ಶಿಕ್ಷಣ – ಶಿಷ್ಟ ರಕ್ಷಣಕ್ಕಾಗಿ ಆದಿರುದ್ರನ ಅವತಾರವಾಗುತ್ತದೆ. ಲೋಕೋದ್ಧಾರಕ್ಕಾಗಿ ಆದಿರುದ್ರ ಸಿದ್ಧಮುನಿಯನ್ನು ಸೃಷ್ಟಿಸುತ್ತಾನೆ. ಆದಿರುದ್ರನ ಆದೇಶದಂತೆ ಸಿದ್ಧ ಮುನಿ ಸುದೀರ್ಘ ತಪಸ್ಸನ್ನಾಚರಿಸುತ್ತಾನೆ. ಸಿದ್ಧಮುನಿ ತನ್ನ ತಪಸ್ಸಾಧನೆಯ ದಿವ್ಯಜ್ಞಾನವನ್ನು ಲೋಕದ ಜನರಿಗೆ ಬಿತ್ತರಿಸಿ, ಸಂಚರಿಸುತ್ತಾ ಕರುನಾಡಿಗೆ ಪ್ರವೇಶಿಸಿ, ಹನ್ನೆರಡು ಜನ ನಾಥ ಮುನಿಗಳಿಗೆ ಹರಸಿ, ಸಾಧು ಸಂಘ ಮಠ ಸ್ಥಾಪನೆಗೆ ಪ್ರಯತ್ನಿಸಿದ ವಿವರಗಳನ್ನು ಕವಿ ಸ್ವಾರಸ್ಯವಾಗಿ ಚಿತ್ರಿಸುತ್ತಾರೆ.

ಸ್ವರ್ಗಲೋಕದಲ್ಲಿ ಅಧಿಪತ್ಯಕ್ಕಾಗಿ ಬ್ರಹ್ಮ–ವಿಷ್ಣುಗಳ ನಡುವೆ ವ್ಯಾಜ್ಯವೇರ್ಪಡುತ್ತದೆ. ಅದನ್ನು ತಪ್ಪಿಸಿ ದೇವಲೋಕವನ್ನು ರಕ್ಷಿಸಲು ಶಿವನಲ್ಲಿ ದೇವತೆಗಳು ಮೊರೆಯಿಡುತ್ತಾರೆ. ಶಿವ–ಬ್ರಹ್ಮ–ವಿಷ್ಣುಗಳನ್ನು ಮಟ್ಟ ಹಾಕಲು ಆದಿಶಕ್ತಿಯನ್ನು ಪ್ರಾರ್ಥಿಸಿ ಆಕೆಯಿಂದ ಶಕ್ತಿಯುತ ಆಯುಧವೊಂದನ್ನು ಪಡೆಯುತ್ತಾನೆ. ವಿಷ್ಣು ಶಿವನಿಗೆ ಶರಣಾದರೆ, ಬ್ರಹ್ಮ ಸೆಟೆದು ನಿಲ್ಲುತ್ತಾನೆ. ಶಿವ ತನ್ನ ಉಗುರಿನಿಂದಲೇ ಬ್ರಹ್ಮನ ತಲೆಯೊಂದನ್ನು ಹಿಡಿದೆಳೆದು ಬ್ರಹ್ಮ ಹತ್ಯೆ ಪಾಪಕ್ಕೆ ಗುರಿಯಾಗುತ್ತಾನೆ. ಬ್ರಹ್ಮನ ಶಿರ ಶಿವನ ಕೈಗಂಟಿಕೊಳ್ಳುತ್ತದೆ. ಕಾಶಿಯಲ್ಲಿ ಅನ್ನಪೂರ್ಣೆ ಶಿವನಿಗೆ ಭಿಕ್ಷೆ ನೀಡಿದಾಗ, ಶಿವ ಪಾಪ ವಿಮುಕ್ತನಾಗಿ ಕೈಗಂಟಿದ ತಲೆ ಕಳಚಿ ಬೀಳುತ್ತದೆ. ದೇವತೆಗಳು ಆನಂದ ಅನುಭವಿಸುತ್ತಾರೆಂದು ಕವಿ ದೇವಲೋಕದ ವರ್ಣನೆಯಲ್ಲಿ ಸೊಗಸಾಗಿ ಅಭಿವ್ಯಕ್ತಿಸುತ್ತಾರೆ.

ಕಾಲ ವೈಪರೀತ್ಯದಂತೆ ಕೈಲಾಸದಲ್ಲೂ ಕುಟಿಲತೆ ಕಾಣಿಸಿಕೊಳ್ಳುತ್ತದೆ. ಹಿಮಗಿರಿಗೆ ಅಹಂ ಬಂದು ವಿಂಧ್ಯಗಿರಿಯನ್ನು ಟೀಕಿಸುತ್ತದೆ. ಅಗಸ್ತ್ಯ ಮುನಿಗಳಿಂದ ಹಿತವಚನ ಕೇಳಿ ಎರಡು ಪರ್ವತಗಳ ಅಸಮಾಧಾನ ಇಲ್ಲವಾಗುತ್ತದೆ. ಅಗಸ್ತ್ಯ ಮುನಿಗಳು ಅರಣ್ಯ ಸಂಚಾರ ಹೊರಡುತ್ತಾರೆ. ಲೋಪಾಮುದ್ರೆಯ ಅಪೇಕ್ಷೆಯಂತೆ ಕಾವೇರಿ ನದಿ ಸೃಷ್ಟಿಯಾಗುತ್ತದೆ. ಕಾವೇರಿ ತಟದ

ಚುಂಚನಕಟ್ಟೆಯಲ್ಲಿ ಶಿವ ತಪಸ್ಸು ಮಾಡುತ್ತಾನೆ. ಅದೇ ಸಂದರ್ಭದಲ್ಲಿ ಸೀತೆಯನ್ನು ಕಳೆದುಕೊಂಡ ಶ್ರೀರಾಮ ಸೋದರ ಲಕ್ಷ್ಮಣನೊಡನೆ ದುಃಖಿಸುತ್ತಾ ಕಾವೇರಿ ಪ್ರಾಂತ್ಯಕ್ಕೆ ಬರುತ್ತಾನೆ. ಶಿವ, ಶ್ರೀರಾಮನಿಗೆ ಸಾಂತ್ವನ ಹೇಳುತ್ತಾನೆ. ಶಿವ ಪಾರ್ವತಿಯರು ತಪ್ಪಸ್ಸಿಗೆ ಚುಂಚಾದ್ರಿಗೆ ತೆರಳುತ್ತಾರೆ.

ಚುಂಚಾದ್ರಿಯಲ್ಲಿ ಚುಂಚ ಕಂಚ ದಾನವರನ್ನು ಶಿವ ಸಂಹರಿಸುತ್ತಾನೆ. ಕೇಶವ ಕಾಶಿಯಲ್ಲಿ ಶಿವ ಪೂಜೆ ಮಾಡಲು ಬ್ರಹ್ಮ ಟೀಕಿಸುತ್ತಾನೆ. ಶಿವನಿಂದ ಸೃಷ್ಟಿಯಾದ ಭೈರವ, ಸಿಟ್ಟಿನಿಂದ ಬ್ರಹ್ಮನನ್ನು ಅಪ್ಪಳಿಸುತ್ತಾನೆ. ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮನನ್ನು ಶಿವ ರಕ್ಷಿಸುತ್ತಾನೆ. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ ಮಾಡುತ್ತಾ ಲೋಕ ಸಂಚಾರ ಮಾಡುವಂತೆ ಭೈರವನಿಗೆ ಶಿವ ಆದೇಶಿಸುತ್ತಾನೆ.

ಶಿವ ಶಿವೆ ದತ್ತನಿಂದ ಸುಜ್ಞಾನ ಪಡೆದು ಮಚ್ಚೇಂದ್ರನಾಥ ನೇಪಾಳದಲ್ಲಿ ನಾಥ ಪಂಥ ಸ್ಥಾಪನೆ ಮಾಡುತ್ತಾನೆ. ವಂಗ ದೇಶದಲ್ಲಿ ನಾಥ ಪಂಥದ ಪ್ರಚಾರ ಕಾರ್ಯ ನಡೆಯುತ್ತದೆ. ಮಚ್ಚೇಂದ್ರನ ಸಾಹಸ, ಪವಾಡ ಮೆರೆಯುತ್ತದೆ. ಮಚ್ಚೇಂದ್ರನಿಂದ ಗೋರಕ್ಷ ಸೃಷ್ಟಿಯಾಗುತ್ತಾನೆ. ಇಬ್ಬರೂ ಹರಿಯನ್ನು ನೋಡಲು ಪುರಿಗೆ ಪ್ರಯಾಣಿಸುತ್ತಾರೆ. ಇಬ್ಬರಿಂದಲೂ ಅಸಾಮಾನ್ಯ ಸಾಧನೆಗಳು ತೋರಲ್ಪಡುತ್ತವೆ. ಮಚ್ಚೇಂದ್ರ ಸ್ತ್ರೀ ರಾಜ್ಯದಲ್ಲಿ ರಾಣಿಯೊಡನೆ ಗಮಿಸುತ್ತಾನೆ. ವಿವಿಧ ನಾಥರ ಸೃಷ್ಟಿಯಾಗುತ್ತದೆ. ನಾಥ ಪಂಥದವರು ಚುಂಚಾದ್ರಿಗೆ ಬರುತ್ತಾರೆ.

ಸಿದ್ಧಮುನಿ ಚುಂಚಾದ್ರಿಗೆ ಬಂದು ಶಿವ-ಶಿವೆಯರನ್ನು ಸ್ತುತಿಸುತ್ತಾನೆ. ಅಲ್ಲಿ ಉರಿಗದ್ದುಗೆ ಸ್ಥಾಪಿತವಾಗುತ್ತದೆ. ನಾಥ ಮುನಿಗಳು ನೇಮಕವಾಗುತ್ತಾರೆ. ಶಾಖಾ ಮಠಗಳು ಪ್ರಾರಂಭವಾಗುತ್ತವೆ. ಶಿವ-ಶಿವೆಯರಲ್ಲಿಗೆ ಭೈರವ ಆಗಮಿಸುತ್ತಾನೆ. ಚುಂಚಾದ್ರಿಯಲ್ಲಿ ನೆಲೆಸಲು ಭೈರವನಿಗೆ ಶಿವನಿಂದ ಆದೇಶವಾದಾಗ, ಭೈರವ ಚುಂಚಾದ್ರಿಯಲ್ಲೇ ನೆಲೆಸುತ್ತಾನೆ. ಶಿವ ಬಾಲಗಂಗಾಧರನಾಗಿ ನೆಲೆಸಿದರೆ, ಶಿವೆ ಸ್ತಂಭಾಂಭೆಯಾಗಿ ನೆಲೆಸುತ್ತಾಳೆ. ಬೈರವನಿಂದ ಸಿದ್ಧಮುನಿ ಚುಂಚನಗಿರಿಯಲ್ಲಿ ಪೀಠಾರೋಹಣ ಮಾಡುತ್ತಾನೆ. ಭೈರವನು ಸಿದ್ಧ ಮುನಿಗೆ ಬೋಧಿಸುತ್ತಾನೆ. ಸಿದ್ಧ ಮುನಿಯ ಅಪೇಕ್ಷೆಯಂತೆ ದ್ವಾದಶ ಪಂಥದವರಿಂದ ದ್ವಾದಶ ಪೀಠಗಳು ಸ್ಥಾಪನೆಯಾಗುತ್ತವೆ.

ಸಿದ್ಧಮುನಿಯಿಂದ ಕರ್ಮನಾಥನಿಗೆ, ಆನಂತರ ಬೇರೆಯವರಿಗೆ ಪಟ್ಟಾಭಿಷೇಕವಾಗುತ್ತಾ ಹೋಗುತ್ತದೆ. ಎಲ್ಲರೂ ಧರ್ಮಬೋಧೆ ಮಾಡಿ, ಜನ ಸಾಮಾನ್ಯರ ಸಾರ್ಥಕ ಬಾಳಿಗೆ ನೆರವಾಗುತ್ತಾರೆ. **ಬ್ರಹ್ಮೋಪದೇಶ, ಪ್ರಕೃತಿ ರಹಸ್ಯ, ಜೀವನ ಧರ್ಮ, ಶಿವ ಮಹಿಮೆ, ಮನುಷ್ಯ ಸ್ವಭಾವ, ನೈತಿಕತೆ, ಆಸ್ತಿಕತೆ, ಸನ್ನಡತೆ, ಸಹಕಾರತತ್ವ, ವೇದ ಮಹತ್ವ, ದರ್ಶನ ವಿಚಾರ, ಅನಾಥರ ಅಶಕ್ತರ ಉದ್ಧಾರ, ಮೃತ್ಯು ಅನಿವಾರ್ಯತೆ, ಗುರು ಮಹತ್ವ, ಉಪನಿಷತ್ ಸಾರ, ಶಾಂತಿ, ಆತ್ಮ ತತ್ವ, ವಿಶ್ವ ವಿಧಿಯಾಟ, ತಪಸ್ಸು, ತಮೋಗುಣ ನಿವಾರಣೆ, ಸತ್ಯ ಶಿವ ಸುಂದರ, ಮೋಕ್ಷ, ಆತ್ಮ ಸಾಕ್ಷಾತ್ಕಾರ, ಬ್ರಹ್ಮ ಸಾಕ್ಷಾತ್ಕಾರ, ಜೀವಾತ್ಮ-ಜಗದಾತ್ಮ ಸಂಬಂಧ, ಗುರು ಸೇವೆ, ಪರಹಿಂಸೆ ವರ್ಜನ್ಯ, ಪುನರ್ಜನ್ಮ, ಕರ್ಮ ನಿವಾರಣೆ, ಅಜ್ಞಾನ ನಾಶ, ದಾನ ಮಹತ್ವ, ಸತ್ಯ ದಯೆ ಅಗತ್ಯ, ಮಾನವನೇ ಮಾದೇವ, ಪರಸೇವೆ ಪುಣ್ಯಕರ, ವಿಶ್ವಾತ್ಮ ವೈಭವ, ಭಕ್ತಿಯ ಅಗತ್ಯ, ಶಮೆ ದಯೆ ಸದ್ಗತಿಗೆ ಸೋಪಾನ, ಶ್ರಮದಿಂದ ಸುಖ,**

**ಕರ್ಮ ಫಲ, ಮಾತೃ ಗೌರವ, ಸತ್ಯ ಪಥ, ಸೇವೆ, ದೇವರು, ಭಕ್ತರ ರಕ್ಷಕ, ಶಿವನ ಮಾಯೆ, ಶಿವನಾಟ, ಭೈರವನ ಮಹಿಮೆ, ಸೌಹಾರ್ದತೆ, ಸಹನೆ, ನೈತಿಕ ಧರ್ಮ, ಧ್ಯಾನ, ಕರ್ಮ, ಧರ್ಮ, ಸಮಾಜ ಸೇವೆ, ಚಿತ್ತಶುದ್ಧಿ, ಚಿತ್ತ ಚಾಂಚಲ್ಯ, ಯೋಗ, ಸತ್ಪಥ, ಪವಾಡ, ಗುರುಶಿಷ್ಯ ಸಂಬಂಧ** – ಮೊದಲಾದ ವಿಚಾರಗಳನ್ನು ಕುರಿತು ನಾಥಮುನಿಗಳು ಉಪದೇಶ ಮಾಡಿ, ಜನ ಜಾಗೃತಿ ಉಂಟು ಮಾಡುತ್ತಾರೆ.

ತೇಜನಾಥರು ಉತ್ತರಾಧಿಕಾರಿಯನ್ನು ನೇಮಿಸದೆ ಚುಂಚನಗಿರಿ ಮಠ, ಒಕ್ಕಲಿಗರಿಗೆ ಸೇರಿದ್ದೆಂದು ಪತ್ರ ಬರೆದಿಟ್ಟು, ಆಕಸ್ಮಿಕ ಖಾಯಿಲೆಯಿಂದ ತೀರಿಕೊಳ್ಳುತ್ತಾರೆ. ಒಕ್ಕಲಿಗರ ಮುಖಂಡ ಕೆ.ಹೆಚ್. ರಾಮಯನವರ ನೇತೃತ್ವದಲ್ಲಿ ಹೊಸ ಗುರುವಿಗಾಗಿ ಹುಡುಕಾಟ ಆರಂಭವಾಗುತ್ತದೆ. ಸನ್ಮಾನ್ಯ ರಾಮಯ್ಯನವರ ಪತ್ತೆಯಾಗುತ್ತದೆ. ಭಕ್ತನಾಥರೆಂದು ನಾಮಕರಣವಾಗಿ ಪೀಠಾಧೀಶರಾಗಿ ನೇಮಕರಾಗುತ್ತಾರೆ. ಸರ್ಕಾರದಿಂದ ಸಹಾಯ ಪಡೆದು, ಮಠದ ಮಹಿಮೆ ಪ್ರಚಾರ ಕಾರ್ಯದಲ್ಲಿ ತೊಡಗುತ್ತಾರೆ. ೪೦ ವರ್ಷ ಗುರುವಾಗಿದ್ದು, ಚಂದ್ರಶೇಖರನಾಥರನ್ನು ಶಿಷ್ಯರೆಂದು ನೇಮಿಸಿ ಪಟ್ಟ ಕಟ್ಟುತ್ತಾರೆ. ಚಂದ್ರಶೇಖರನಾಥರು ಶಿಕ್ಷಣ ಶಾಲೆ, ವಿದ್ಯಾರ್ಥಿ, ಸನಾತನ ಧರ್ಮ ಬೋಧಿಸುತ್ತಾರೆ. ಹಲವು ಧಾರ್ಮಿಕ ಕೃತಿಗಳನ್ನು ರಚಿಸುತ್ತಾರೆ. ಭಕ್ತರಿಗೆ ಸ್ವಯಂ ಚಿಕಿತ್ಸೆ ನೀಡುತ್ತಾರೆ. ಕೇವಲ ೧೧ ತಿಂಗಳು ಗುರು ಪೀಠದಲ್ಲಿದ್ದು ಆಕಸ್ಮಿಕ ಸಾವಿಗೆ ತುತ್ತಾಗುತ್ತಾರೆ.

ಸನ್ಯಾಸಿ ನರಸಪ್ಪನವರನ್ನು ಶ್ರೀಮಠಕ್ಕೆ ಕರೆಯಿಸಿಕೊಳ್ಳಲಾಗುತ್ತದೆ. ಅವರನ್ನು ರಮಾನಂದನಾಥರೆಂದು ನಾಮಕರಣ ಮಾಡಿ ಪಟ್ಟ ಕಟ್ಟಲಾಗುತ್ತದೆ. ಭಕ್ತರಿಗೆ ವಿದ್ಯಾರ್ಥಿಗಳಿಗೆ ಶಿವ ದರ್ಶನ, ಕರುನಾಡ ಕಥೆ, ಕನ್ನಡ ಸಾಹಿತ್ಯ ಪರಿಚಯ, ವಿಜಯನಗರ ಸ್ಥಾಪನೆ – ಮುಂತಾದ ವಿಚಾರಗಳನ್ನು ರಮಾನಂದನಾಥರು ಬೋಧಿಸುತ್ತಾರೆ. ಹೆಚ್ಚು ವಯಸ್ಸಾದ ಕಾರಣ, ಉತ್ತಮ ಭಕ್ತರುಗಳಿಗಾಗಿ ಪತ್ರಿಕೆಗಳಲ್ಲಿ ಪ್ರಕಟಣೆ ನೀಡಲಾಗುತ್ತದೆ. ಸನ್ಯಾಸಿಯಾಗಲು ತಂದೆ ತಾಯಿಯರಿಂದ ಒಪ್ಪಿಗೆ ಪಡೆದ ಬಾನಂದೂರು ಗಂಗಾಧರಯ್ಯನವರು ಸನ್ಯಾಸಿಯಾಗಲು ಮುಂದೆ ಬರುತ್ತಾರೆ. ಅವರ ತಂದೆ–ತಾಯಿಗಳಿಂದ ಒಪ್ಪಿಗೆ ಪತ್ರ ಪಡೆದು, ಗುರು ದೀಕ್ಷೆ ಮಾಡಿ ಬಾಲಗಂಗಾಧರನಾಥ ಎಂದು ನಾಮಕರಣ ಮಾಡಲಾಯಿತು. ಕೈಲಾಸ ಆಶ್ರಮದಲ್ಲಿ ಸಂಸ್ಕೃತ ಅಭ್ಯಾಸ ನಡೆಯಿತು. ರಮಾನಂದನಾಥರು ತೀರಿಕೊಳ್ಳುತ್ತಾರೆ. ಹಿರಿಯ ಗುರುಗಳ ಮರಣ ಶಾಸನದಂತೆ ಬಾಲಗಂಗಾಧರನಾಥರಿಗೆ ಪಟ್ಟಾಭಿಷೇಕವಾಗುತ್ತದೆ.

ಬಾಲಗಂಗಾಧರನಾಥರ ಪೂರ್ವ ವೃತ್ತಾಂತ ವರ್ಣನೆ, ಪವಾಡ ಸದೃಶ ಘಟನೆಗಳು ಕಾರಣಿಕವಾಗಿದ್ದು, ಬಾಲಗಂಗಾಧರನಾಥರ ದೃಷ್ಟಾಂತ ಕಥೆಗಳು, ಸ್ವಾಮಿಗಳ ವಿದೇಶ ಪ್ರವಾಸ, ಭಕ್ತರಿಂದ ನಿಧಿ ಸಂಗ್ರಹ, ಜೀವ–ದೇಹಗಳ ಬಗೆಗೆ ಉಪದೇಶ, ಹಲವು ಶಿಕ್ಷಣ ಸಂಸ್ಥೆಗಳ ಸ್ಥಾಪನಾ ಕಾರ್ಯಗಳನ್ನು ಕುರಿತ ವಿಸ್ತೃತ ವರ್ಣನೆಗಳಿವೆ.

ಬಾಲಗಂಗಾಧರನಾಥರು ಹಲವು ವಟುಗಳಿಗೆ ಧರ್ಮದೀಕ್ಷೆ ನೀಡುತ್ತಾರೆ; ಶಾಖಾ ಮಠಗಳು ಸ್ಥಾಪನೆಯಾಗುತ್ತವೆ; ವೈಜ್ಞಾನಿಕ ಶಿಕ್ಷಣಕ್ಕೆ ಆದ್ಯತೆ ನೀಡುತ್ತಾರೆ; ಪರಿಸರ ಕಾಳಜಿ ತೋರುತ್ತಾರೆ;

ಚುಂಚನಗಿರಿಯ ಸಮಗ್ರ ಅಭಿವೃದ್ಧಿಗೆ ಕಾರಣರಾಗುತ್ತಾರೆ; ಜನಪದ ಕಲೆ ಕಲಾವಿದರಿಗೆ ಪ್ರೋತ್ಸಾಹ ನೀಡುತ್ತಾರೆ; ಶಿಕ್ಷಣ ಭವನಗಳನ್ನು ಸ್ಥಾಪಿಸುತ್ತಾರೆ; ಅವರಿಂದ ಚುಂಚನಗಿರಿ ಪವಿತ್ರ ಪುಣ್ಯ ಕ್ಷೇತ್ರವಾಗಿ, ಆಕರ್ಷಣೀಯ ಕೇಂದ್ರವಾಗಿ ರೂಪಾಂತರವಾಗುತ್ತದೆ. ನಿರಂತರ ದುಡಿಮೆಯಲ್ಲಿ ಜಗದ್ಗುರುಗಳು ಧನ್ಯತೆ ಕಂಡುಕೊಂಡಿದ್ದಾರೆ. ಆದಿಚುಂಚನಗಿರಿಯ ಭವ್ಯ ಪರಂಪರೆ, ಹನುಮೇಗೌಡರ ಮಹಾಕಾವ್ಯಕ್ಕೆ ಸ್ಫೂರ್ತಿಯಾಗಿದೆ.

ಶ್ರೀ ಹನುಮೇಗೌಡರು **"ಶ್ರೀಆದಿಚುಂಚನಗಿರಿ ಕ್ಷೇತ್ರ ದರ್ಶನಂ"** ಕಾವ್ಯ **"ಚುಂಚಾದ್ರಿ ಚಂದ್ರಿಕೆ"** ರಚನೆಯ ಮೂಲಕ ಗುರು ಮಠದ ಋಣ, ಗುರು ಋಣ, ಜನಾಂಗದ ಋಣವನ್ನು ಏಕಕಾಲಕ್ಕೆ ತೀರಿಸಿದಂತಾಗಿದೆ. ಧಾರ್ಮಿಕ ತನ್ಮಯತೆ, ನಿಷ್ಠೆ, ಭಕ್ತಿ, ಒಲವು ಇಲ್ಲದಿದ್ದರೆ ಇಂಥ ಕಾವ್ಯವನ್ನು ಬರೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಶ್ರೀಹನುಮೇಗೌಡರ ಭಾಗಕ್ಕೆ ಇದು ಧನ್ಯತೆಯ ಮಹಾಕಾರ್ಯವಾಗಿದೆ. ಕಾವ್ಯವನ್ನು ಬರೆದು ಶ್ರೀಮಠಕ್ಕೆ ಅರ್ಪಿಸುವುದರ ಮೂಲಕ ಸಂತೃಪ್ತರಾಗಿದ್ದಾರೆ. ಅವರಿಗೆ ಇದು ಕಾವ್ಯ ಕಾಯಕಕ್ಕಿಂತ ಧಾರ್ಮಿಕ ಕಾಯಕವಾಗಿದೆ; ಆತ್ಮ ತೃಪ್ತಿಯ ದ್ಯೋತಕವಾಗಿದೆ. ಶ್ರೀ.ಸಿ.ಹನುಮೇಗೌಡರು ತಮ್ಮ ಜೀವನಾನುಭವದ ಸಮಸ್ತ ಪ್ರತಿಭೆಯನ್ನು ಧಾರೆಯೆರೆದು ಸುದೀರ್ಘ ಧಾರ್ಮಿಕ ಕಾವ್ಯವನ್ನು ಬರೆದಿದ್ದಾರೆ. ಆಸ್ತಿಕ ಸಹೃದಯರು ಈ ಕಾವ್ಯಾಭ್ಯಾಸದಿಂದ ತಮ್ಮ ಧಾರ್ಮಿಕ ಭಾವ ಸಂಪತ್ತನ್ನು ಸಮೃದ್ಧ ಪಡಿಸಿಕೊಳ್ಳಲಿ" – ಎನ್ನುವ **ಡಿ.ಲಿಂಗಯ್ಯ**ನವರ ಹಾರೈಕೆ ಮಾತುಗಳು ಖಂಡಿತಾ ಉತ್ಪ್ರೇಕ್ಷೆ ಎನಿಸಲಾರವು.

# *ನಾಥ ಪಂಥ*

ಭಾರತದ ಧರ್ಮಗಳಲ್ಲಿ **'ತಂತ್ರ'** ಮತ್ತು **'ಯೋಗ'** ಮಾರ್ಗಗಳು ಪ್ರಮುಖ ಪಾತ್ರ ವಹಿಸುತ್ತವೆ. ಆದರೆ **'ಯೋಗ'** ಮಾರ್ಗವೊಂದನ್ನೇ ಆಶ್ರಯಿಸಿ ಬೆಳೆದದ್ದು **'ನಾಥ ಪಂಥ'**. ಸಿದ್ಧರು ಇದರ ಅನುಯಾಯಿಗಳಾಗಿದ್ದುಕೊಂಡು ನಾಥ ಪಂಥವನ್ನು ಸದೃಢವಾಗಿ ಬೆಳೆಸಿದ್ದಾರೆ. ಭಾರತವನ್ನು ದಾಟಿ ನಾಥ ಪಂಥ ತನ್ನ ಪ್ರಭಾವ ಬೀರಿದೆಯೆಂದರೆ ಅದರ ಸಿದ್ಧಾಂತದ ತೀಕ್ಷ್ಣತೆ ಅನುಪಮವಾದದ್ದೆಂದೇ ಅರ್ಥವಾಗುತ್ತದೆ.

ವೈದಿಕ ಪರಂಪರೆಯಲ್ಲಿ ಬಂದ ಮೌಲ್ಯಗಳಿಂದ ಶೂದ್ರರಿಗೆ ಆಗುತ್ತಿದ್ದ ಅನ್ಯಾಯ, ಶೋಷಣೆ, ಅಸ್ಪೃಶ್ಯತೆ, ಜಾತೀಯತೆಗಳನ್ನು 'ನಾಥ ಪಂಥ' ಖಂಡಿಸುತ್ತದೆ. ಸಂಪ್ರದಾಯ, ಮೂಢನಂಬಿಕೆ, ಕಂದಾಚಾರಗಳನ್ನು ವಿರೋಧಿಸಿ ಶೂದ್ರರಲ್ಲಿ ಧಾರ್ಮಿಕ ಜಾಗೃತಿ ಉಂಟು ಮಾಡಲು ಈ ಪಂಥ ಸಾಕಷ್ಟು ಶ್ರಮಿಸಿದೆ. ತನ್ನ ಸಿದ್ಧಾಂತ ನಿರೂಪಣೆಗೆ ಆಯಾ ಪ್ರದೇಶದ ಜನಸಾಮಾನ್ಯರು ಬಳಸುತ್ತಿದ್ದ ಸರಳ ಭಾಷೆಯನ್ನೇ ಬಳಸಿಕೊಂಡಿದ್ದರಿಂದ ನಾಥ ಪಂಥ ಹಲವರಿಗೆ ಪ್ರಿಯವೆನಿಸಿದೆ. ಕಾಬೂಲ್, ಜಪಾನ್‌ವರೆಗೂ ತನ್ನ ಪ್ರಭಾವ ಬೆಳೆಸಿಕೊಂಡಿದ್ದರಿಂದ, ಹಲವು ದೇಶಗಳ ಜನರು ಈ ಪಂಥದ ಅನುಯಾಯಿಗಳಾಗಲು ಸಾಧ್ಯವಾಗಿದೆ.

**ನಾಥ ಪಂಥದ ಮೂಲ:**

ನಾಥ ಪಂಥಕ್ಕೆ ಬೌದ್ಧ ಧರ್ಮವೇ ಮೂಲವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಮಾನವತಾವಾದವನ್ನೇ ಸಿದ್ಧಾಂತ ಮಾಡಿಕೊಂಡ ಬೌದ್ಧ ಧರ್ಮ, ತನ್ನ ಅವನತಿಯ ಕಾಲದಲ್ಲಿ ವಜ್ರಯಾನ ಎನ್ನುವ ತಾಂತ್ರಿಕ ಸ್ವರೂಪದ ಪಳೆಯುಳಿಕೆಗಳನ್ನು ಬಿಟ್ಟು ಹೋಗಿತ್ತು. ವಜ್ರಯಾನದ ಕೆಲವು ಉತ್ತಮ ಅಂಶಗಳೊಡನೆ ಶೈವ ಮತದ ಇತ್ಯಾತ್ಮಕ ವಿಚಾರಗಳನ್ನು ಬಳಸಿಕೊಂಡು ನಾಥ ಪಂಥ, ಕುಡಿಯೊಡೆಯಿತೆಂದು ಭಾವಿಸಲಾಗಿದೆ. ಶೈವ ಮತದ ಕವಲು ಪಂಥಗಳೆಂದೇ ಹೆಸರಾದ ಲಕುಲೀಶ, ಪಾಶುಪತ, ಕಾಳಾಮುಖ, ಕಾಪಾಲಿಕ, ಕೌಲ, ಶಾಕ್ತ ಮತ್ತು ಕರ್ನಾಟಕದ ವೀರಶೈವ ಪಂಥಗಳ ಅನೇಕ ಸಂಗತಿಗಳು ಮತ್ತು ಸಿದ್ಧಾಂತಗಳನ್ನಾಧರಿಸಿ 'ನಾಥ ಪಂಥ' ಉಗಮಗೊಂಡಿದೆ. ಹೀಗಾಗಿ ನಾಥ ಪಂಥದ ಮೂಲ ಕೆದಕುವ ಮೊದಲು ಶೈವ ಪಂಥದ ಈ ಕವಲುಗಳ ಸ್ವರೂಪವನ್ನು ಸ್ಥೂಲವಾಗಿ ಅರಿಯುವುದು ಅಗತ್ಯವಾಗಿದೆ.

**ಲಕುಲೀಶ:**

**'ಲಕುಲೀಶ'** ಎಂಬಾತ ಶೈವ ಧರ್ಮದ ಸಂಸ್ಥಾಪಕ; ಈತನನ್ನು **'ನಕುಲೀಶ'** ಎಂತಲೂ ಕರೆಯುತ್ತಾರೆ. ಶೈವ ಧರ್ಮಕ್ಕೆ **'ಲಾಕುಳ ಸಮಯ'** ಎಂದು ಹೆಸರು ಬರಲು ಈತನೇ ಕಾರಣನಾಗಿದ್ದಾನೆ. "ಶಿವನು, ಲಕುಲೀಶನಾಗಿ ಜನಿಸಿದ ಕಥೆ **'ಕಾರ್ವಾಣ್ ಮಹಾತ್ಮ್ಯ'**ದಲ್ಲಿದೆ. **'ಕಾರ್ವಾಣ್'** ಎಂಬುದು ಒಂದು ಸಣ್ಣ ಹಳ್ಳಿಯ ಹೆಸರಾಗಿದ್ದು ಇದು ಗುಜರಾತಿನ ಬರೋಡಾದಲ್ಲಿದೆ". ರಾಜಸ್ಥಾನ, ಬಂಗಾಳ, ಮಾಳವಗಳಲ್ಲಿ ಲಕುಲೀಶ್ವರನ ದೇವಾಲಯಗಳಿವೆ.

ಲಕುಲೀಶನ ವಿಗ್ರಹಗಳು ಬಲಗೈಯಲ್ಲಿ ಮಾದಲದ ಹಣ್ಣನ್ನೂ, ಎಡಗೈಯಲ್ಲಿ ಲಕುಲ (ದಂಡ) ವನ್ನು ಹಿಡಿದಿರುವುದನ್ನು ಕಾಣಬಹುದು. ಮಧುರೆಯ ಶೈವ ಸ್ಥಂಭದ ಮೇಲೆ ಕೆತ್ತಲಾದ ಶಾಸನದಲ್ಲಿ ಲಕುಲೀಶನ ಕಾಲ ಕ್ರಿ.ಶ ೨ನೇ ಶತಮಾನವೆಂದು ಗುರುತಿಸಲಾಗಿದೆ. ಇದೇ ಕಾಲದಲ್ಲಿ ಆಳುತ್ತಿದ್ದ ಕುಶಾನರ ರಾಜ ಹುವಿಷ್ಕನ ನಾಣ್ಯಗಳ ಮೇಲೆ ಲಕುಟಧಾರಿ ಶಿವಮುದ್ರೆಯಿದೆ. ಹೀಗಾಗಿ ಲಕುಲೀಶ ಮತ ಗುಜರಾತಿನಿಂದಲೇ ದಕ್ಷಿಣ ಭಾರತಕ್ಕೆ ಕಾಲಿಟ್ಟಿರಬೇಕೆನ್ನಿಸುತ್ತದೆ.

ಲಾಕುಳ ಶೈವರು ಭೈರವೇಶ್ವರನ ಆರಾಧಕರು. ಅವರಲ್ಲಿ ಕೆಲವರು ಯಂತ್ರ-ಮಂತ್ರ-ತಂತ್ರಗಳಲ್ಲಿಯೂ ಪರಿಣತರಾಗಿದ್ದರು. ಶಿವನೊಡನೆ ಐಕ್ಯವಾಗಲು ಎರಡು ಮಾರ್ಗಗಳನ್ನು ಲಕುಲೀಶರು ನಂಬಿದ್ದರು. ಧ್ಯಾನ, ಜಪತಪಗಳನ್ನಾಧರಿಸಿದ **'ಕರ್ಮಮಾರ್ಗ'** ಮತ್ತು ಇಂದ್ರಿಯ ಸಂಯಮದ **'ಯೋಗ ಮಾರ್ಗ'. ಭಗವನ್ನಾಮ ಸ್ಮರಣೆ, ಭಸ್ಮ ಧಾರಣೆ, ಭಿಕ್ಷಾಟನೆ, ಅಹಂಕಾರ ದಮನ, ಕಷ್ಟ-ಅಪಮಾನಗಳ ಸಹಿಷ್ಣುತೆ** – ಇವು ಲಕುಲೀಶರ ಲಕ್ಷಣಗಳು. ಲಾಕುಳ ಶೈವರು ಜ್ಞಾನ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಿದ್ದರು. ಜನರೊಂದಿಗೆ ಬೆರೆತು ಬಾಳುತ್ತಿದ್ದ ಇವರು ಕೆರೆ ಕಟ್ಟೆ ಕಟ್ಟುವ, ದೇವಾಲಯ ನಿರ್ಮಿಸುವ ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಬಾದಾಮಿಯ ಸಮೀಪದಲ್ಲಿರುವ **'ಮಕುಟೇಶ್ವರ ದೇವಾಲಯ'** ಲಾಕುಳರು ಕಟ್ಟಿದ್ದೆಂದು ಹೇಳುತ್ತಾರೆ. ಕ್ರಿ.ಶ ೧೧ನೇ ಶತಮಾನದ ಬಳ್ಳಿಗಾವೆಯ ಕೋಡಿ ಮಠ, ಪ್ರಮುಖ ಶೈಕ್ಷಣಿಕ ಕೇಂದ್ರವಾಗಿದ್ದು, ಲಾಕುಳರ ಕೊಡುಗೆಯೆನಿಸಿದೆ.

**ಪಾಶುಪತ:**

ಪಶುಪತಿಯ ಆರಾಧಕರೇ ಪಾಶುಪತರು. "ಶೈವ ಧರ್ಮದ ಪ್ರಾಚೀನತೆಯನ್ನು ಪ್ರಸಿದ್ಧ ನಾಗರೀಕತೆಯಾದ ಹರಪ್ಪ-ಮೊಹೆಂಜೊದಾರೋವಿನಲ್ಲಿನ ಪಶುಪತಿ ಆರಾಧನೆಯಿಂದಲೇ ಗುರುತಿಸಬಹುದು. ಕ್ರಿ.ಶ ೩ನೇ ಶತಮಾನದ ಕುಶಾನರ ಅರಸ ವೆಮಕಡ್ಫಿಸೆಸ್ ತನ್ನ ನಾಣ್ಯಗಳ ಹಿಂದೆ ತಾನು ಮಹೇಶ್ವರನ ಭಕ್ತನೆಂದು ಸಾರಿದ್ದಾನೆ. ಕ್ರಿ.ಶ ೭ನೇ ಶತಮಾನದಲ್ಲಿ ಹುಯೆನ್‌ತ್ಸಾಂಗ್ ಮಹೇಶ್ವರನ ದೇವಸ್ಥಾನಗಳ ಬಗ್ಗೆ ಹೇಳುತ್ತ ದೇಹಕ್ಕೆ ಭಸ್ಮ ಬಳಿದುಕೊಂಡು ಜಟೆ ಬೆಳೆಸಿ ಶಿವಧ್ಯಾನ ಮಾಡುತ್ತಿದ್ದ ಸನ್ಯಾಸಿಗಳನ್ನು ತಾನು ವಾರಣಾಸಿಯಲ್ಲಿ ಕಂಡದ್ದಾಗಿ ಹೇಳಿಕೊಂಡಿದ್ದಾನೆ. ಬಾಣನ **'ಕಾದಂಬರಿ'**ಯಲ್ಲಿ ತಾರಾಪೀಡನ ಮಂತ್ರಿಯಾದ ಶುಕನಾಸನನ್ನು ಕಾಣಲು ಬಂದವರಲ್ಲಿ ಪಾಶುಪತರೂ ಇದ್ದರೆಂದು ವರ್ಣಿಸಲಾಗಿದೆ. ಶ್ರೀಶೈಲದಲ್ಲಿದ್ದ **'ಅಘೋರ ಘಂಟ'** ಎಂಬ ಪಾಶುಪತ ಗುರುವಿನ ಪ್ರಸ್ತಾಪ ಭವಭೂತಿಯ **'ಮಾಲತೀ ಮಾಧವ'**ದಲ್ಲಿ ಬಂದಿದೆ".[*೧೧]

ಪಾಶುಪತರಲ್ಲಿ ಹಲವರು ಭೈರವನ ಆರಾಧಕರಾಗಿದ್ದರು. ಭೈರವ ದೇವಾಲಯಗಳನ್ನು ಕಟ್ಟಿಸಿದ, ಜೀರ್ಣೋದ್ಧಾರ ಮಾಡಿದ ದಾಖಲೆಗಳು ಶಾಸನಗಳಲ್ಲಿವೆ. ಯೋಗದ ಮೂಲಕ ಸಿದ್ಧಿ ಪಡೆಯಬಹುದೆನ್ನುವುದು ಈ ಪಂಥದವರ ಅಭಿಪ್ರಾಯ. ಪಾಶುಪತ ಸಿದ್ಧಾಂತದಲ್ಲಿ

ಕಾಲಭೈರವಾರಾಧನೆ, ಸನ್ಯಾಸಿಯ ಸ್ವರೂಪ ಮೊದಲಾದ ವಿವರಗಳಿದ್ದು, ನಾಥ ಪಂಥದವರೂ ಕೂಡ ಅದನ್ನೇ ಅನುಸರಿಸುತ್ತಾ ಬಂದಿದ್ದಾರೆ.

**ಕಾಳಾಮುಖ:**

ಲಾಕುಳ ಅಥವಾ ಪಾಶುಪತರನ್ನು **'ಕಾಳಾಮುಖ'** ಎಂದು ಕೂಡ ಕರೆಯುತ್ತಾರೆ. **'ಕಾಳಾಮುಖ'**ರೇ **ಕಾಪಾಲಿಕರು** ಎಂದು · ರಾಮಾನುಜಾಚಾರ್ಯರು ಹೇಳುತ್ತಾರೆ. ಇವರು ಮಹೇಶ್ವರನ ಆರಾಧಕರು. ಇವರಲ್ಲಿ ಸನ್ಯಾಸಿನಿಯರೂ ಇದ್ದರೆಂದು ತಿಳಿದು ಬಂದಿದೆ. ಕಾಪಾಲಿಕ ಸನ್ಯಾಸಿಗಳ ವರ್ಣನೆಯನ್ನು ಬಾಣನ **'ಹರ್ಷಚರಿತೆ'**ಯಲ್ಲಿ ಕಾಣಬಹುದಾಗಿದೆ. ಕಾಳಾಮುಖರು ಮುಖದ ಮೇಲೆ ಕರಿಯ ಗೆರೆಗಳನ್ನು ಬಳಿದುಕೊಳ್ಳುತ್ತಿದ್ದುದರಿಂದ ಅವರನ್ನು **'ಅಸಿತವಕ್ತ'**ರೆಂದು ಕರೆಯುತ್ತಿದ್ದರು. ಈ ವಿಷಯ ಸೋಮದೇವನ **'ಯಶಸ್ತಿಲಕ ಚಂಪು'**ವಿನಲ್ಲಿ ಪ್ರಸ್ತಾಪವಾಗಿದೆಯೆನ್ನುವುದು **'ಕರ್ನಾಟಕ ಕವಿಚರಿತೆ'**ಯಲ್ಲಿ ಕಾಣುತ್ತೇವೆ. ಹಿಂದಿನ ಲಾಕುಳ ಪಾಶುಪತರಿಗೆ ಹೋಲಿಸಿದಾಗ, ಕಾಳಾಮುಖರಿಗೆ ಅಂಥ ದೊಡ್ಡ ವ್ಯತ್ಯಾಸವೇನೂ ಕಾಣುವುದಿಲ್ಲ. ಈ ಮೂರು ಪಂಗಡದವರು ಶಿವನ ಆರಾಧಕರಾಗಿದ್ದರು. ಕಾಳಾಮುಖರ ಯೋಗ, ಸಿದ್ಧಿಗಳ ಪ್ರಭಾವ ನಾಥ ಪಂಥದವರ ಮೇಲೂ ಆಗಿದೆ.

**ಕಾಪಾಲಿಕರು:**

ಕ್ರಿ.ಶ. ೭ನೇ ಶತಮಾನದಲ್ಲಿ ನಾಸಿಕದ ಕಾಪಾಲೇಶ್ವರ ದೇವಾಲಯದಲ್ಲಿ ಕಾಪಾಲಿಕರು ವಾಸವಾಗಿದ್ದರೆಂದು ಹೇಳುತ್ತಾರೆ. ಅದೇ ಕಾಲಮಾನದ ಪಲ್ಲವ ದೊರೆ ಮಹೇಂದ್ರ ವಿಕ್ರಮನ **'ಮತ್ತ ವಿಲಾಸ ಪ್ರಹಸನ'**ದಲ್ಲಿ ಕಾಪಾಲಿಕರ ವರ್ಣನೆ ಇದೆ. ಹೂಯೆನ್‌ತ್ಸಾಂಗ್‌ನ ಪ್ರವಾಸ ಕಥನದಲ್ಲೂ ಕಾಪಾಲಿಕರ ಸಂಗತಿ ಬರುತ್ತದೆ. **ಕೃಷ್ಣ ಮಿತ್ರನ 'ಪ್ರಬೋಧ ಚಂದ್ರೋದಯ'**ದಲ್ಲಿ ಕಾಪಾಲೀಕರು ಕಾಲಭೈರವೇಶ್ವರನ ಆರಾಧಕರು ಎನ್ನುವ ಸಂಗತಿ ಇದೆ.

ಕಾಪಾಲಿಕರು ಪ್ರಸಾದವನ್ನು ಕಪಾಲದಲ್ಲಿ ಸ್ವೀಕರಿಸುತ್ತಿದ್ದರಂತೆ. "ಭಸ್ಮವನ್ನು ಲೇಪಿಸಿಕೊಳ್ಳುವುದು ಮತ್ತು ಭಸ್ಮವನ್ನು ತಿನ್ನುವ ರೂಢಿ ಕೂಡ ಇತ್ತು. ಗದೆ, ಮದ್ಯಪಾತ್ರೆಯನ್ನು ಸದಾ ಹಿಡಿದಿರುತ್ತಿದ್ದರಂತೆ. ಮದ್ಯಪಾತ್ರೆಯಲ್ಲಿಯೇ ಶಿವನಿದ್ದಾನೆಂದು ಭಾವಿಸುತ್ತಿದ್ದರು. ಯಜ್ಞೋಪವೀತ, ಕರ್ಣ ಕುಂಡಲ ಮೊದಲಾದುವುಗಳನ್ನು ಧರಿಸುತ್ತಿದ್ದರು. ಮಾಂಸ ಭಕ್ಷಿಸುತ್ತಿದ್ದ ಇವರು, ಸ್ಮಶಾನದಲ್ಲಿ ಯೋಗ ಸಾಧನೆ, ಭೈರವೀ ಸಾಧನೆ ಮಾಡುತ್ತಿದ್ದರು. ಶಿವನ ಭೈರವ ರೂಪ ಮತ್ತು ಅಘೋರ ರೂಪದ ಆರಾಧನೆ ಮಾಡುತ್ತಿದ್ದರೆಂದು*೦೨ ತಿಳಿದು ಬಂದಿದೆ. ಈ ಅಂಶ ನಾಥ ಪಂಥದಲ್ಲಿಯೂ ಇರುವುದನ್ನು ಗಮನಿಸಬಹುದು.

**ಕೌಲರು:**

ಅಲ್ಲಟನನ್ನು **'ಕೌಲ'** ಸಿದ್ಧಾಂತದ ಮೂಲ ಪ್ರವರ್ತಕನೆಂದು ಕರೆಯುತ್ತಾರೆ. ಭಾವರಕ್ತ ಎನ್ನುವ ಹೆಸರೂ ಇವನಿಗಿದೆ. ಈತ ಪಾಶುಪತ ಗುರುವಾದ ವಿಶ್ವರೂಪನ ಶಿಷ್ಯ. ಕಾಪಾಲಿಕರು

ಶೈವರೆನಿಸಿದರೆ, ಕೌಲರು ಶಾಕ್ತರು. ಕೌಲರು ಮದ್ಯ, ಮಾಂಸ, ಮೀನುಗಳನ್ನು ಪೂಜಾ ಸಮಯದಲ್ಲಿ ಬಳಸುತ್ತಿದ್ದರು.

**ವೀರಶೈವ:**

ಕರ್ನಾಟಕದಲ್ಲಿ ಪ್ರಾರಂಭವಾಗಿ ದಕ್ಷಿಣ ಭಾರತದಲ್ಲೆಲ್ಲ ಹಬ್ಬಿ ಜನಪ್ರಿಯವಾದ **'ವೀರಶೈವ'**ವನ್ನು ಕೂಡ **'ನಾಥ ಪಂಥ'**ದ ರೀತಿಯಲ್ಲೇ **'ಶಕ್ತಿ ವಿಶಿಷ್ಟಾದ್ವೈತ'** – ಎನ್ನುತ್ತಾರೆ. ಇದು **ರೇಣುಕ – ದಾರುಕ – ಘಂಟಾಕರ್ಣ – ಧೇನುಕರ್ಣ – ವಿಶ್ವಕರ್ಣ**ರೆನ್ನುವ **ಪಂಚಾಚಾರ್ಯ**ರಿಂದ ಸ್ಥಾಪಿತವಾಯಿತೆಂದು ಒಂದು ವಾದ ಹೇಳಿದರೆ, ವೀರಶೈವ ಮತ ಅನಾದಿಕಾಲದಿಂದಲೂ ಇತ್ತು ಎಂದು ಮತ್ತೊಂದು ವಾದ ಹೇಳುತ್ತದೆ. ಆದರೆ ೧೨ನೇ ಶತಮಾನದ **ಬಸವಣ್ಣನವರು** ವೀರಶೈವ ಪಂಥವನ್ನು ಎತ್ತಿ ಹಿಡಿದಿರುವುದು ಮಾತ್ರ ಐತಿಹಾಸಿಕ ಸತ್ಯ.

ಭಾರತದ ಬೇರೆ ಬೇರೆ ಭಾಗಗಳಿಂದ ಕರ್ನಾಟಕಕ್ಕೆ ಬಂದು ನೆಲೆಸಿದ ಹಲವು ಶೈವ ಪಂಥಗಳು ೧೦–೧೧ನೇ ಶತಮಾನದಲ್ಲಿ ಪರಸ್ಪರ ಮೇಲಾಟ ನಡೆಸುತ್ತಿದ್ದವು. ಇಂತಹ ಸಂದರ್ಭದಲ್ಲಿ ಬಸವಣ್ಣನವರು ಹಲವು ಶೈವ ಪಂಥಗಳ ಸಾರವತ್ತಾದ ಅಂಶಗಳನ್ನು ಸಂಗ್ರಹಿಸಿ ಮುಖ್ಯವಾಗಿ ಲಿಂಗಧಾರಣೆಯ ಲಾಂಛನವನ್ನಿಟ್ಟುಕೊಂಡು **'ಲಿಂಗಾಯತ'** ಮತವನ್ನು ಸ್ಥಾಪಿಸಿದರು. ಕಾಲಕ್ರಮದಲ್ಲಿ ಬಸವಣ್ಣನವರು ಸ್ಥಾಪಿಸಿದ ಮತ ಧರ್ಮವು **'ಲಿಂಗಾಯತ'** ಮತ್ತು **'ವೀರಶೈವ'** ಎಂಬ ಎರಡೂ ಹೆಸರುಗಳಿಂದ ಪ್ರಚಲಿತವಾಯಿತು.

ಜೀವಾತ್ಮ ಮತ್ತು ಪರಮಾತ್ಮಗಳಿಬ್ಬರೂ ಒಂದೇ ಎನ್ನುವುದು ಈ ಪಂಥದವರ ಸಿದ್ಧಾಂತ. ಇಡೀ ಸೃಷ್ಟಿಗೆ ಶಿವನೇ ಕಾರಣ ಎಂದು ಇವರು ನಂಬುತ್ತಾರೆ. ಸಾಧನೆಯಿಂದ ದೊರೆಯುವ ಆನಂದವನ್ನು **'ಲಿಂಗಾಂಗ ಸಾಮರಸ್ಯ'** ಎನ್ನುತ್ತಾರೆ. ಲಿಂಗ ಮತ್ತು ಅಂಗಗಳೆರಡೂ ಶಿವನ ರೂಪಗಳಾಗಿದ್ದು, ಇವುಗಳನ್ನು **'ಸ್ಥಲ'**ಗಳೆಂದು ಕರೆಯುತ್ತಿದ್ದರು. ಇದರಲ್ಲೇ ಸಂಸಾರ, ಜಗತ್ತು ನಡೆಯುತ್ತಿದೆ ಎನ್ನುವ ನಂಬಿಕೆ ಇವರದಾಗಿತ್ತು. ಭಾರತೀಯ **ಆಧ್ಯಾತ್ಮ ವಾದದ** (Spiritualism) ಮೂಲ ಚಿಂತನೆ ಇದು. ಇದಕ್ಕೆ ಪ್ರತಿಯಾದುದು **ಭೌತವಾದ** ಅಥವಾ **ಲೋಕಾಯುತ** (Materialism) ಶಿವನ ಅಂಶವು ಇಹ ಲೋಕದಲ್ಲಿ ಜನ್ಮ ತಳೆಯುವುದು; ಜ್ಞಾನೋದಯವಾಗಿ ಶಿವಭಕ್ತಿ ಸಾಧನೆಯ ಮೂಲಕ ಭವಬಂಧನಗಳನ್ನು ಕಳೆದುಕೊಂಡು ಪುನಃ ಶಿವನಲ್ಲಿ ಐಕ್ಯರಾಗುವುದು (**ಶೂನ್ಯ ಸಂಪಾದನೆ**) ಇದೇ ಮುಕ್ತಿ. ಹೀಗೆ ಮುಕ್ತಿ ಪಡೆಯಲಾರದವರು **'ಭವಿ'**ಗಳು (ಭವಿಯ–ಕೌಶಿಕ ರಾಜನ– ಸಂಗವನೊಲ್ಲೆ–**ಅಕ್ಕಮಹಾದೇವಿ**).

**ಶಾಕ್ತರು:**

ಬೌದ್ಧಮತದ ಕೆಲವು ತಾಂತ್ರಿಕ ಸಂಗತಿಗಳನ್ನು ಆಧರಿಸಿ ಹುಟ್ಟಿಕೊಂಡ ಮತವೇ ಶಾಕ್ತಮತ. ಶಕ್ತಿಯೇ ಈ ಜಗತ್ತಿನ ಜನನಿ ಎಂದು ಈ ಘುತ ನಂಬುತ್ತದೆ. ಈ ಶಕ್ತಿಯನ್ನು ಚಿದ್ರೂಪಿಣಿ. ಮಾತೃ ಸ್ವರೂಪಿಣಿ ಎಂದು ಶಾಕ್ತರು ಕರೆಯುತ್ತಾರೆ. **ಮೂಲಾಧಾರ**ದಲ್ಲಿರುವ **ಕುಂಡಲಿನೀ ಶಕ್ತಿ**ಯನ್ನು

ಜಾಗೃತಗೊಳಿಸಿ **ಷಟ್ ಚಕ್ರ**ಗಳ ಮೂಲಕ ಹಾದು **ಬ್ರಹ್ಮಾನಂದ** ಪಡೆಯುವುದನ್ನು ರೂಢಿಸಿಕೊಂಡಿದ್ದರು. ಇವರಲ್ಲಿ **'ದಕ್ಷಿಣಾಚಾರ'** ಮತ್ತು **'ವಾಮಾಚಾರ'**ಗಳೆನ್ನುವ ಎರಡು ಪದ್ಧತಿ ಇತ್ತು. ಬೆಳಗಿನ ಸಂಧ್ಯಾವಂದನೆ, ಆಸನಗಳ ಬಳಕೆ, ಸಕ್ಕರೆ ಹಾಲು ಸೇವನೆ, ರುದ್ರಾಕ್ಷಿ ಧಾರಣೆ, ಪತ್ನಿಯೊಂದಿಗೆ ಭೋಗ ತೃಪ್ತಿ **'ದಕ್ಷಿಣಾಚಾರ'** ಎನಿಸಿದರೆ, ನೃದಂತ ಮಾಲೆ, ಕಪಾಲ ಪಾತ್ರೆ, ಮತ್ಸ್ಯ–ಮಾಂಸ ಭಕ್ಷಣೆ, ಅನ್ಯ ಸ್ತ್ರೀಯರೊಂದಿಗಿನ ಸಂಬಂಧಗಳು ವಾಮಾಚಾರ ಪದ್ಧತಿಯ ಲಕ್ಷಣಗಳೆನಿಸಿವೆ. ವಾಮಾಚಾರ ಮಾರ್ಗದಲ್ಲಿ ನಡೆಯುವುದು ಕತ್ತಿಯ ಮೇಲೆ ನಡೆದಷ್ಟೇ ಕಠಿಣಕರವಾದುದೆಂದು ಶಾಕ್ತರು ನಂಬಿದ್ದರು.

– ಹೀಗೆ ಲಕುಲೀಶ, ಪಾಶುಪತ, ಕಾಳಾಮುಖ, ಕಾಪಾಲಿಕರು, ವೀರಶೈವ, ಕೌಲರು ಮತ್ತು ಶಾಕ್ತರುಗಳ ಜೀವನ ವಿಧಾನ ಮತ್ತು ಸಿದ್ಧಾಂತಗಳು **'ನಾಥ ಪಂಥ'**ದ ಮೇಲೆ ವಿಪುಲ ಪ್ರಭಾವ ಬೀರಿವೆ. ಭೈರವನ ಆರಾಧನೆಯೇ ಬಹುತೇಕ ಎಲ್ಲರಲ್ಲೂ ಕಂಡು ಬರುವುದರಿಂದ ಮತ್ತು ಶಿವನ ಅಂಶವೇ ಭೈರವನೆಂಬ ನಂಬಿಕೆ ಇರುವುದರಿಂದ ನಾಥ ಪಂಥದಲ್ಲೂ ಇದೇ ರೀತಿಯ ಲಕ್ಷಣ ಕಾಣಬಹುದಾಗಿದೆ.

**ನಾಥ ಸಿದ್ಧರು:**

ನಾಥ ಪಂಥದ ಮೂಲ ಪುರುಷರೇ **'ನಾಥ ಸಿದ್ಧರು'**, **'ಸಿದ್ಧ'** ಎಂಬ ಪದ **'ಷಿಧು'** ಎಂಬ ಪದದಿಂದ ನಿಷ್ಪನ್ನಗೊಂಡಿದೆ. **'ಪರಿಪೂರ್ಣವಾದ'**, **'ಪಕ್ವವಾದ'**, **'ಗುರಿ ಮುಟ್ಟಿದ'**, **'ಸಾಧಿಸಿದ'** ಮೊದಲಾದ ಅರ್ಥಗಳನ್ನು ಇದು ಪಡೆದುಕೊಂಡಿದೆ. ಬೌದ್ಧ ಗ್ರಂಥಗಳಲ್ಲಿ **'ಅತೀಂದ್ರಿಯ ತತ್ವ ಸಾಧನೆಗಳನ್ನು ಸಾಕ್ಷಾತ್ಕರಿಸಿಕೊಂಡವನೇ ಸಿದ್ಧ'** ಎನ್ನುವ ಮಾತಿದೆ. "ಕ್ರಿ.ಶ ೭ನೇ ಶತಮಾನದ ಪ್ರಸಿದ್ಧ ಸಿದ್ಧನಾದ **'ತಿರುಮೂಲರ್'** ಎಂಬಾತ **'ಯಾರು ಯೋಗ ಸಮಾಧಿಯಲ್ಲಿ ನಿರತರಾಗಿರುವರೋ ಅವರು ದಿವ್ಯ ಶಕ್ತಿಯನ್ನು ಪಡೆದು ದಿವ್ಯ ಪ್ರಭೆಯನ್ನೂ ಕಾಣುತ್ತಾರೆ. ಯೋಗ ಸಮಾಧಿಗೆ ತೆರಳದವರು ಸಿದ್ಧರಲ್ಲ'** ಎಂದಿದ್ದಾನೆ. 'ವೇಗವಾಗಿ ಚಲಿಸುತ್ತಿದ್ದ ಮೋಡಗಳನ್ನು ಸಿದ್ಧರು ಮಂತ್ರಮುಗ್ಧರಂತೆ ನೋಡುತ್ತಿದ್ದ'ರೆಂದು ಕಾಳಿದಾಸ ಮೇಘದೂತದಲ್ಲಿ ವರ್ಣಿಸಿದ್ದಾರೆ".[*೩] ಪುರಾಣಗಳ ಪ್ರಕಾರ ಸಿದ್ಧರು ಒಂದು ಜನಾಂಗವಾಗಿದ್ದು, ಇವರು ಪರ್ವತಗಳಲ್ಲಿ ವಾಸವಾಗಿರುತ್ತಾರೆಂದು ಹೇಳಲಾಗಿದೆ. ಇವರಲ್ಲಿನ ಸಾಂಪ್ರದಾಯಿಕ ಭಿನ್ನತೆಗಳಿಂದ **ಬೌದ್ಧ ಸಿದ್ಧರು, ನಾಥ ಸಿದ್ಧರು, ರಸ ಸಿದ್ಧರು, ಮಾಹೇಶ್ವರ ಸಿದ್ಧರು, ಕಾಪಾಲಿ ಸಿದ್ಧರು, ಜ್ಞಾನ ಸಿದ್ಧರು** ಎಂದು ಅನೇಕ ವಿಧಗಳನ್ನು ಗುರುತಿಸುತ್ತಾರೆ. ಇವರನ್ನು **'ಸಿದ್ಧಯೋಗಿ'**ಗಳೆಂದೂ ಕರೆಯುವುದುಂಟು.

**"ಯೋಗಿ ಸಂಪ್ರದಾಯ ನಿಷ್ಕೃತಿ"** ಆಧಾರದ ಮೇಲೆ ನವನಾಥರ ಶಿಷ್ಯ ವೃಕ್ಷವನ್ನು ಹೀಗೆ ಚಿತ್ರಿಸಲಾಗಿದೆ:




ಇಲ್ಲಿ ಆದಿನಾಥನೇ ಶಿವ. ಮತ್ಸ್ಯೇಂದ್ರನಾಥ ಮತ್ತು ಗೋರಕ್ಷನಾಥರು ಶಿವನ ಶಿಷ್ಯರು. ಕಾನೀಫಾ, ಜಾಲಂಧರನಾಥನ ಶಿಷ್ಯ. ಇವರಲ್ಲಿ ಶಿವ ದೇವನಾದರೆ, ಉಳಿದವರು ಈ ಲೋಕದ ಮಾನವರು. ಮತ್ಸ್ಯೇಂದ್ರನಾಥ–ಗಹಿನೀನಾಥ–ಜಾಲಂಧರನಾಥ–ಕಾನಿಫಾನಾಥ–ನಾಗನಾಥ–ಚರ್ಪಟನಾಥ–ರೇವನಾಥ–ಭರ್ತೃನಾಥ ಮತ್ತು ಗೋಪಿಚಂದ್ರರನ್ನು ನವನಾಥರೆಂದು*೪ ಕರೆಯಲಾಗಿದೆ.

ನವನಾಥರಿಂದ ನಾಥ ಸಂಪ್ರದಾಯಕ್ಕೆ ಸ್ಪಷ್ಟ ಆಕೃತಿ, ಗಟ್ಟಿ ಸಿದ್ಧಾಂತಗಳು ದೊರೆತಿವೆ. ಹೀಗಾಗಿ ಅವರನ್ನು ನಾಥ ಪಂಥದ ಪ್ರಗತಿಯ ಆಧಾರ ಸ್ಥಂಭಗಳೆಂದು ಕರೆಯಬಹುದು. ನವನಾಥರೇ ನಾಥ ಪಂಥದ ಮೂಲಪುರುಷರು. **'ಸಿದ್ಧಯೋಗಿ'**ಗಳೆಂದೂ ಇವರನ್ನು ಕರೆಯುತ್ತಾರೆ. ಮನಸ್ಸನ್ನು ಒಂದೇ ಕಡೆ ನಿಲ್ಲಿಸಿ ಮಾಡುವ ಧ್ಯಾನದಿಂದ ವಿವಿಧ ಪ್ರಾಕೃತಿಕ ಶಕ್ತಿಗಳನ್ನು ನಿಯಂತ್ರಿಸಬಹುದೆಂದು ಸಿದ್ಧಯೋಗಿಗಳು ತಿಳಿದಿದ್ದರು. ತತ್ವಜ್ಞಾನ, ಸಾಧನಾ ಪದ್ಧತಿ, ಹಠಯೋಗ.

ಅನುಷ್ಠಾನ ಹಾಗೂ ಅಭಿವ್ಯಕ್ತಿ ಎಂಬ ಪಂಚ ಪಥದಲ್ಲಿ ಇವರು ನಡೆದವರಾಗಿದ್ದರು. ಶೂದ್ರರನ್ನೂ, ಸ್ತ್ರೀಯರನ್ನೂ ಕಡೆಗಣಿಸದೆ ಅವರನ್ನೂ ಧಾರ್ಮಿಕ ಪರಿಧಿಯೊಳಗೆ ಬರುವಂತೆ ಮಾಡಿದರು.

ನಾಥ ಪಂಥದ ಮೂಲವನ್ನು ದಕ್ಷಿಣ ಭಾರತದಲೇ ಹುಡುಕುವುದು ಒಳಿತು ಎಂದು **'ನಾಥ ಸಂಪ್ರದಾಯದ ಇತಿಹಾಸ'** ಕೃತಿಯ ಕರ್ತೃ **ಡಾ.ರಾಮಚಂದ್ರ ಚಿಂತಾಮಣ ಢೇರೆ**ಯವರು ಅಭಿಪ್ರಾಯ ಪಡುತ್ತಾರೆ. ಕದಳಿ ಬನದಲ್ಲಿ ಯೋಗಿನಿಗಳು ವಾಸವಾಗಿದ್ದ ಜಾಗದಲ್ಲಿ ನಾಥಪಂಥದ ಮೂಲ ಪುರುಷನೆನಿಸಿದ ಮತ್ಸೇಂದ್ರನಾಥನು ವಾಸವಾಗಿದ್ದಾಗ, ಆತನ ಶಿಷ್ಯ ಗೋರಕ್ಷಕನು ಆತನನ್ನು ಅಲ್ಲಿಂದ ಪಾರು ಮಾಡುತ್ತಾನೆ, ಎನ್ನುವ ಸಾಂಪ್ರದಾಯಿಕ ಕಥೆ ಎಲ್ಲೆಲ್ಲಿಯೂ ಪ್ರಚಲಿತವಾಗಿದೆ. ಈ ಕದಳೀ ಬನ ಬೇರೆಲ್ಲೂ ಇಲ್ಲ. ಅದು ಶ್ರೀಶೈಲದ ಕದಳಿ ಬನವೇ ಎಂಬುದು ರಾಮಚಂದ್ರರ ಅಭಿಪ್ರಾಯವಾಗಿದೆ. ನಾಥ ಸಂಪ್ರದಾಯದ ಆರಂಭ ಕಾಲದಲ್ಲಿ ಶ್ರೀಶೈಲವು ತಾಂತ್ರಿಕ ಸಾಧನೆಗಳ ಪ್ರಭಾವಿ ಕೇಂದ್ರವಾಗಿತ್ತು. ಅಲ್ಲಿ ಮದ್ಯ-ಮಾಂಸ-ಸ್ತ್ರೀ ಪ್ರಧಾನ ತಂತ್ರಗಳು ಬಳಕೆಯಲ್ಲಿದ್ದವು. ಆ ಕಾಲದಲ್ಲಿ ಬೌದ್ಧ ಧರ್ಮದ ವಜ್ರಾಯಾನದ ಪ್ರಭಾವ ಶ್ರೀಶೈಲದ ಮೇಲಿತ್ತು. ಶ್ರೀಶೈಲ ಅಂದು ಶೈವ-ಬೌದ್ಧ ಮತ್ತು ಶಾಕ್ತ ತಂತ್ರಗಳ ಕೇಂದ್ರವಾಗಿತ್ತು ಎಂಬ ಢೇರೆಯವರ ಅಭಿಪ್ರಾಯದಲ್ಲಿ ನಾಥ ಸಂಪ್ರದಾಯದ ಮೂಲ, ಉತ್ತರ ಭಾರತದಲ್ಲಿಲ್ಲ; ದಕ್ಷಿಣ ಭಾರತದಲ್ಲೇ ಇರುವಂಥದ್ದು ಎನ್ನುವ ನಿಲುವು ಕಾಣುತ್ತದೆ.[*೫]

ಆದರೆ ರಹಮತ್ ತರೀಕೆರೆಯವರು "ಢೇರೆಯವರು, ಮತ್ಸೇಂದ್ರನು ಸಿಲುಕಿಕೊಂಡಿದ್ದ ಸ್ತ್ರೀ ರಾಜ್ಯವು ಯೋಗಿನಿಯರುಗಳಿಂದ ಕೂಡಿದ್ದ ಶ್ರೀಶೈಲದ ಕದಳೀ ವನವೇ ಎಂದು ಅಭಿಪ್ರಾಯ ಪಡುತ್ತಾರೆ. ತೆಲುಗಿನ ಗೋರನ ಕವಿಯು ತನ್ನ **'ನವನಾಥ ಚರಿತ್ರಮು'** ಕೃತಿಯನ್ನು ಮಲ್ಲಿಕಾರ್ಜುನನಿಗೆ ಅರ್ಪಿಸಿರುವುದನ್ನು ಆಧರಿಸಿ ಇದು ನಾಥ ಪಂಥದ ಜಾಗವೆಂದು ಹೇಳುತ್ತಾರೆ. ಆದರೆ ಸಧ್ಯ ಇಲ್ಲಿ ಯಾವುದೇ ನಾಥ ಮಠವಿಲ್ಲ. "ನಾಥರಲ್ಲೂ ಶ್ರೀಶೈಲಕ್ಕೆ ಯಾವುದೇ ಸ್ಥಾನವಿಲ್ಲ" ಎಂದಿದ್ದಾರೆ. ಕೆಲವರು ಸ್ತ್ರೀರಾಜ್ಯವೆನ್ನುವುದು 'ಕೇರಳ'ವನ್ನು ಕುರಿತ ಮಾತು ಎಂದು ಊಹಿಸಿದ್ದಾರೆ. ಆದರೆ ಈ ವಿಚಾರದ ಬಗೆಗೆ ಸ್ಪಷ್ಟ ಆಧಾರಗಳು ಕಾಣದ ಕಾರಣ ನಾಥಪಂಥದ ಮೂಲದ ಬಗ್ಗೆ ಇದಮಿತ್ಥಂ ಎಂದು ಹೇಳಲು ಸಾಧ್ಯವಾಗಿಲ್ಲ".[*೦೬]

## 'ನಾಥ' ಪದದ ಅರ್ಥ ವಿವರಣೆ:

**ರಾಜಗುಹ್ಯ** ಎಂಬ ಗ್ರಂಥದಲ್ಲಿ **'ನಾಥ'** ಎಂದರೆ ಏನೆಂದು ಸೂತ್ರ ರೂಪದಲ್ಲಿ ಹೇಳಲಾಗಿದೆ:

**"ನಕಾರೋನಾದಿರೂಪಃ ಥಕಾರಃ ಸ್ಥಾಪ್ಯತೇ ಸದಾ ।**

**ಭುವನತ್ರಯ ಮೇವೈಕ ಶ್ರೀ ಗೋರಕ್ಷ ನಮೋಸ್ತುತೇ ॥"**

– ಇಲ್ಲಿ **'ನಾ'** ಎಂದರೆ ಅನಾದಿ ರೂಪ. **'ಥ'** ಎಂದರೆ ಮೂರು ಲೋಕಗಳ ಹುಟ್ಟಿಗೆ ಕಾರಣನಾದವನು ಎಂದು ಅರ್ಥೈಸಲಾಗಿದೆ. **'ಶಕ್ತಿ ಸಂಗಮ ತಂತ್ರ'** ದಲ್ಲಿ ಅಜ್ಞಾನವನ್ನು ಕಳೆದು

ಮೋಕ್ಷವನ್ನು ಕೊಡುವ ಪರ ವಸ್ತುವೇ **'ಶ್ರೀನಾಥ'** ಎಂದು ಹೇಳಿದೆ. **ಅಥರ್ವವೇದ** ಹಾಗೂ **ತೈತ್ತರೀಯ ಬ್ರಾಹ್ಮಣದಲ್ಲಿ 'ನಾಥ'** ಎಂದರೆ **'ರಕ್ಷಕ'** ಅಥವಾ **'ಆಶ್ರಯದಾತ'** ಎಂದು ಹೇಳಲಾಗಿದೆ. **'ನಾಥ'** ಪದಕ್ಕೆ **'ಪತಿ' 'ಒಡೆಯ'** ಎನ್ನುವ ಸಮಾನ್ಯ ಅರ್ಥಗಳೂ ಇವೆ. **'ಹಠಯೋಗ ಪ್ರದೀಪಿಕೆ'** ಎನ್ನುವ ಕೃತಿಯಲ್ಲಿ ಬ್ರಹ್ಮಾನಂದ ಆದಿನಾಥನೆನಿಸಿಕೊಂಡ ಶಿವನೇ ಎಲ್ಲಾ ನಾಥರಿಗೂ ಮೊದಲಿಗನು; ಆತನಿಂದಲೇ ನಾಥ ಸಂಪ್ರದಾಯ ಹುಟ್ಟಿಕೊಂಡಿತು; ಹೀಗಾಗಿ ಆ ಸಂಪ್ರದಾಯದವರೆಲ್ಲರಿಗೂ **'ನಾಥ'** ಎಂಬ ಹೆಸರು ಅಂಟಿಕೊಂಡಿತೆಂದು ಹೇಳಲಾಗಿದೆ. ನಾಥ ಪಂಥಕ್ಕೆ **'ಸಿದ್ಧಮತ'**, **'ಸಿದ್ಧಮಾರ್ಗ'**, **'ಯೋಗ ಸಂಪ್ರದಾಯ'**, **'ಅವಧೂತ ಮತ'** ಮೊದಲಾದ ಹೆಸರುಗಳಿವೆ. ಈಶ್ವರನೇ ಯೋಗ ವಿದ್ಯೆಗೆ 'ಮೂಲ ಕರ್ತನಾಗಿರುವುದರಿಂದ ನಾಥಯೋಗಿಗಳೆಲ್ಲ ಪರಮ ಶಿವಾರಾಧಕರು, ಪ್ರಸಿದ್ಧ ಹಠಯೋಗಿಗಳು ಮತ್ತು ಸಿದ್ಧರು ಎನಿಸಿಕೊಂಡಿದ್ದಾರೆ.

**ನಾಥ ಪಂಥೀಯರ ವೇಷ ಭೂಷಣಗಳು:**

ನಾಥ ಪಂಥದ ಅನುಯಾಯಿಗಳು ದೀಕ್ಷೆ ಪಡೆಯುವಾಗ, ಕಿವಿ ಚುಚ್ಚಿಸಿಕೊಳ್ಳುವ ಪವಿತ್ರ ಕಾರ್ಯ ನಡೆಯುತ್ತದೆ. ಅವರು ಆ ಸಂದರ್ಭದಲ್ಲಿ ಕಿವಿ ಚುಚ್ಚಿಸಿಕೊಳ್ಳುವುದು ಅನಿವಾರ್ಯವಾದ್ದರಿಂದ ನಾಥ ಪಂಥೀಯರನ್ನು **'ಕನಫಟಾ'** (**ಕಿವಿ ಹರುಕರು**) ಎನ್ನುತ್ತಾರೆ. ಈ ರೀತಿಯ ಕಿವಿ ಛೇದದಿಂದ ನಾಡಿಯು ಶುದ್ಧಗೊಂಡು ಯೋಗ ಸಮಾಧಿ ಪಡೆಯಲು ಅನುಕೂಲವಾಗುತ್ತದೆ ಎನ್ನುವ ನಂಬಿಕೆ ಅವರಲ್ಲಿದೆ. ಚಿನ್ನದ, ಬೆಳ್ಳಿಯ ಕುಂಡಲಗಳನ್ನು ಕಿವಿಯ ಆಭರಣಗಳಾಗಿ ಧರಿಸಲಾಗುತ್ತದೆ. **ದಂಧಾರಿ** ಎನ್ನುವ ಚಕ್ರಾಕಾರದ ಸಾಧನ (ಉಕ್ಕು ಅಥವಾ ಕಟ್ಟಿಗೆಯಿಂದ ಮಾಡಿದ್ದು) ಧರಿಸುತ್ತಾರೆ. **ರುದ್ರಾಕ್ಷಿ ಮಾಲೆ**ಯನ್ನು ಧರಿಸುವುದು ನಾಥ ಪಂಥೀಯರ ಸಾಮಾನ್ಯ ಲಕ್ಷಣವಾಗಿದೆ. ಅವರು ರುದ್ರಾಕ್ಷಿಯನ್ನು ಶಿವನ ಕಣ್ಣೆಂದೇ ಭಾವಿಸುತ್ತಾರೆ. **'ಕಿಂಗರೀ'** ಎನ್ನುವ ವಾದ್ಯ ಸಾಧನ ಹಿಡಿದು ಹಾಡುತ್ತಾರೆ. ಕುರಿಯ ಉಣ್ಣೆಯಿಂದ ಮಾಡಿದ **'ಮೇಖಲಾ'** ಎನ್ನುವ ಸೊಂಟ ಪಟ್ಟಿ ಕಟ್ಟುತ್ತಾರೆ. ಜನಿವಾರ ಧರಿಸುತ್ತಾರೆ. ಕೈಯಲ್ಲಿ ಮಾರುದ್ದವಿರುವ ದಂಡ ಹಿಡಿದಿರುತ್ತಾರೆ. ಇದನ್ನು ಗೋರಕ್ಷನಾಥನ ಅಥವಾ ಭೈರವನ ದಂಡವೆಂದು ಕರೆಯುತ್ತಾರೆ. **'ಕಪ್ಪರ'** ಎನ್ನುವ ಗಡಿಗೆಯ ಭಾಗವನ್ನು ಭಿಕ್ಷಾ ಪಾತ್ರೆಯಾಗಿ ಬಳಸುತ್ತಾರೆ. ಹಣೆಯ ತುಂಬಾ ವಿಭೂತಿ ಹಚ್ಚಿಕೊಳ್ಳುತ್ತಾರೆ. **'ದರ್ಶನ್'** ಎನ್ನುವ ಪವಿತ್ರ ಉಂಗುರವನ್ನು ದೀಕ್ಷಾ ಸಂದರ್ಭದಲ್ಲಿ ಧರಿಸುತ್ತಾರೆ. ಹೀಗಾಗಿ ನಾಥ ಸಾಧುಗಳನ್ನು **'ದರ್ಶಿನೀ ಸಾಧು'**ಗಳೆಂತಲೂ ಕರೆಯುವುದುಂಟು.[*2]

**ನಾಥ ಪಂಥದ ದ್ವಾದಶ ಶಾಖೆಗಳು:**

ಪರಶಿವನೇ ತಮ್ಮ ನಾಥವೆಂದು ಒಪ್ಪುವ **'ನಾಥ ಪಂಥ'**ಕ್ಕೆ ತಾತ್ವಿಕ ಸ್ವರೂಪ, ಧಾರ್ಮಿಕ ಸುಸಂಬದ್ಧತೆಗಳು ದೊರೆತು ಸಮಾಜದಲ್ಲಿ ಭದ್ರವಾಗಿ ನೆಲೆ ನಿಲ್ಲುವಂತಾದದ್ದು

ಗೋರಖನಾಥನಿಂದ. ಈತ ನಾಥ ಪಂಥದ ಹನ್ನೆರಡು ಕವಲುಗಳನ್ನು ಗುರುತಿಸಿ **'ಬಾರಹ ಪಂಥೀ' (ದ್ವಾದಶ ಪಂಥಗಳು)** ಎಂದು ಕರೆಯುತ್ತಾನೆ. ಅವುಗಳೆಂದರೆ: **೧.ಸತ್ಯನಾಥೀ. ೨. ರಾಮನಾಥೀ ೩. ಧರ್ಮನಾಥೀ ೪. ನಾಟೇಶ್ವರೀ ೫. ಕನ್ನಣ ೬. ಕಪಿಲಾನೀ ೭. ವೈರಾಗೀ ೮. ಮೌನನಾಥೀ ೯. ಆಯೀ ಪಂಥ ೧೦. ಪಾಗಲ್ ಪಂಥೀ ೧೧. ಧಜ ಪಂಥೀ ಮತ್ತು ೧೨ ಗಂಗಾ ನಾಥೀ.** ಇವುಗಳಲ್ಲಿ ಪಾಗಲ್ ಪಂಥ, ರಾಮನಾಥೀ ಪಂಥಗಳು ಶಿವನಿಂದಲೇ ಸ್ಥಾಪಿತವಾದವೆಂದೂ, ಕಪಿಲಾನೀ, ಆಯೀ ಪಂಥ, ಧಜ ಪಂಥಗಳು ಗೋರಖನಾಥನಿಂದ ಅಸ್ತಿತ್ವಕ್ಕೆ ಬಂದವೆಂದೂ, ಉಳಿದವು ಇವರಿಬ್ಬರ ಪ್ರಭಾವದಿಂದ ರೂಢಿಗೆ ಬಂದವೆಂದೂ ಇತಿಹಾಸ ಹೇಳುತ್ತದೆ. ಹೀಗೆ ಶೈವ ಧರ್ಮದ ಆಧಾರದಿಂದಲೇ ಹುಟ್ಟಿಕೊಂಡ ನಾಥ ಪಂಥ ಕ್ರಿ.ಶ ೭ನೇ ಶತಮಾನಕ್ಕಿಂತಲೂ ಹಿಂದೆಯೇ ಪ್ರಮುಖ ಧಾರ್ಮಿಕ ಚಳುವಳಿಯಾಗಿ ಪ್ರಭಾವ ಪಡೆದು ಉತ್ತರ ಭಾರತ, ಕರ್ನಾಟಕ, ಮಹಾರಾಷ್ಟ್ರಗಳಲ್ಲದೆ ಹೊರದೇಶಗಳಿಗೂ ಹಬ್ಬಲು ಸಾಧ್ಯವಾಗಿದೆ.

## ನಾಥ ಪಂಥದ ಸಿದ್ಧಾಂತಗಳು:

**'ಸಿದ್ಧ ಸಿದ್ಧಾಂತ ಪದ್ಧತಿ'** ಎನ್ನುವ **ಗೋರಕ್ಷ** ವಿರಚಿತ ಸಂಸ್ಕೃತ ಕೃತಿ ನಾಥ ಪರಂಪರೆಯ ಸಿದ್ಧಾಂತಗಳನ್ನು ಕುರಿತದ್ದಾಗಿದೆ. ನಾಥ ಪಂಥೀಯರು **'ಹಠಯೋಗ'**ವನ್ನು ಪಾಲಿಸುತ್ತಿದ್ದರೆನ್ನುವುದಕ್ಕೆ ಈ ಕೃತಿಯಲ್ಲಿ ಪುರಾವೆಗಳಿವೆ. **'ಹ'** ಎಂದರೆ ಸೂರ್ಯ, **'ಠ'** ಎಂದರೆ ಚಂದ್ರ, **ಸೂರ್ಯ ಚಂದ್ರರ ಯೋಗವೇ 'ಹಠಯೋಗ'**ವೆಂದು ಹೇಳುತ್ತಾರೆ. ಈ ಹಠಯೋಗದಿಂದ ನಾಡಿ ಶುದ್ಧವಾಗಿ, ಮನಸ್ಸು ಸ್ಥಿರವಾಗಿ ಪರಮಾನಂದ ಹೊಂದಲು ಸಾಧ್ಯವೆಂದೂ, ಇದಕ್ಕೆ **'ಸಿದ್ಧ ಸೇವಿತ ಮಾರ್ಗ'** ಎಂತಲೂ ಕರೆದಿದ್ದಾರೆ. ಹಠಯೋಗವು ದೇವ-ಮಾನವರನ್ನು ಒಂದು ಮಾಡುವುದಲ್ಲದೆ, ವ್ಯಕ್ತಿ ರೋಗ-ರುಜಿನಗಳಿಂದ ಬಿಡುಗಡೆಗೊಂಡು ರೋಗಮುಕ್ತನಾಗುತ್ತಾನೆ, ವ್ಯಕ್ತಿಯ ಆಯಸ್ಸು ಕೂಡ ಹೆಚ್ಚಲು ಸಾಧ್ಯವಿದೆ ಎಂದು ನಾಥ ಸನ್ಯಾಸಿಗಳು ನಂಬುತ್ತಾರೆ.

ಶಕ್ತಿ ಸಹಿತವಾದ ಶಿವನ ಆರಾಧನೆಯನ್ನು ನಾಥ ಪಂಥ ಒಪ್ಪಿಕೊಂಡಿದೆ. ಶಿವ-ಶಕ್ತಿ ಸಂಯೋಗದಿಂದ ಪಿಂಡೋತ್ಪತ್ತಿ, ಪಿಂಡದಿಂದ ಬ್ರಹ್ಮಾಂಡ, ಬ್ರಹ್ಮಾಂಡದ ಎಲ್ಲವನ್ನೂ ಮಾನವನ ಶರೀರ ಒಳಗೊಂಡಿರುತ್ತದೆಂದು ಹೇಳಿದ್ದಾರೆ. ಏಕ ಬ್ರಹ್ಮವೇ ಅನೇಕ ದೇಹಗಳನ್ನು ಸೇರಿ ಬೇರೆಬೇರೆಯಾಗಿ ಕಾಣುತ್ತಿದೆ. ಎಲ್ಲಾ ಆತ್ಮಗಳೂ ಪರಮಾತ್ಮನಲ್ಲೇ ಲಯಗೊಳ್ಳುತ್ತದೆಂದು ಭಾವಿಸಿದ್ದಾರೆ. ಯೋಗ ಬಲದಿಂದ ಮನಸ್ಸು ಕ್ರಮೇಣ ಪರಮಾತ್ಮನಲ್ಲಿ ಲೀನಗೊಂಡು ಮೋಕ್ಷ ಸಂಪಾದನೆಗೆ ದಾರಿಯಾಗುತ್ತದೆಂದು ನಂಬಿದ್ದರು. ಕುಂಡಲಿನೀ ಯೋಗದಲ್ಲಿ ನಾಥ ಸಿದ್ಧರಿಗೆ ವಿಶೇಷ ಆಸಕ್ತಿ. **ಮೂಲಾಧಾರ, ಸ್ವಾದಿಷ್ಠಾನ, ಮಣಿಪೂರಕ, ವಿಶುದ್ಧ, ಅನಾಹತ, ಆಜ್ಞಾ ಚಕ್ರ**ಗಳಲ್ಲಿ ಕ್ರಮವಾಗಿ **ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ** ಮತ್ತು **ಮನಸ್ಸು** ಎಂಬ ಆರು ತತ್ವಗಳನ್ನು ದಾಟಿ **'ಸೋಹಂ ಜ್ಞಾನಿ'**ಯಾಗುವುದನ್ನು **'ಮೋಕ್ಷ'** ಎಂದು ಕರೆದಿದ್ದಾರೆ.

"ಲೋಕದಿಂದ ದೊರೆಯಬಹುದಾದ ಜೀವನ ಪಾಠ ಮುಖ್ಯ. ಅದೇ ನಮ್ಮ ಉತ್ತಮ ಮೌಲ್ಯಗಳನ್ನು ಉಂಟುಮಾಡುತ್ತದೆ; "ವ್ಯಕ್ತಿಯೊಬ್ಬ ಸನ್ಯಾಸಿಯಾಗುವ ಮೊದಲು ಆತ ಜಗತ್ತಿನಲೊಬ್ಬನಾಗಿರುತ್ತಾನೆ. ಸನ್ಯಾಸಿಯಾದ ನಂತರ ಜಗತ್ತು ಅವನದಾಗುತ್ತದೆ"; "ಯೋಗಿ ನಕ್ಕು ನಲಿಯಬೇಕು, ಆದರೆ ಕಾಮ ಕ್ರೋಧದ ಸಂಗ ಮಾತ್ರ ಕೂಡದು. ಸಂಯಮಿಯಾಗಿದ್ದು ಧ್ಯಾನ ನಿರತನಾಗಿರಬೇಕು. ಅಹರ್ನಿಶಿಯೂ ಬ್ರಹ್ಮ ಜ್ಞಾನಿಯಾಗಿರಬೇಕು". – ಹೀಗೆ ಹಲವು ರೀತಿ ನೀತಿಗಳನ್ನು ಒಳಗೊಂಡ ನಾಥ ಪಂಥ, **ಸಂಯಮ, ಸಚ್ಚಾರಿತ್ರ್ಯ, ಕಠೋರ ಬ್ರಹ್ಮಚರ್ಯ, ವಾಕ್ ಸಂಯಮ, ಅಂತರಂಗ ಶುದ್ಧಿ, ಮದ್ಯ ಮಾಂಸಾದಿ ಸೇವನೆ ನಿಷೇಧ, ಸದಾಚಾರ** ಮೊದಲಾದ ತನ್ನದೇ ಮೌಲ್ಯಗಳನ್ನು ಅಳವಡಿಸಿಕೊಂಡಿದ್ದರಿಂದ ಮಧ್ಯ ಕಾಲೀನ ಭಕ್ತಿ ಪಂಥಗಳ ಮೇಲೆ ವಿಪುಲ ಪ್ರಭಾವ ಬೀರಲು ಸಾಧ್ಯವಾಗಿದೆ.

## ನಾಥ ಪಂಥದ ಪ್ರಭೇದಗಳು:

**ಗೋರಕ್ಷನಾಥನು** ನಾಥ ಪಂಥಕ್ಕೆ ಹೊಸ ರೂಪ ಕೊಟ್ಟಂಥ ಮಹನೀಯ. ಆತ ಅದುವರೆವಿಗೂ ಧರ್ಮದ ಹೆಸರಿನಲ್ಲಿ ಆಚರಣೆಯಲ್ಲಿದ್ದ ಡಾಂಭಿಕತೆ, ಅನಾಚಾರ, ತಾಂತ್ರಿಕ ವಾಮಾಚಾರಗಳನ್ನು ಖಂಡಿಸಿ, ಅಂತರಂಗ ಶುದ್ಧತೆಗೆ ಮನ್ನಣೆ ನೀಡಿದನು. ಗೋರಕ್ಷನಾಥನಿಗಿಂತಲೂ ಹಿಂದೆ ಇದ್ದ ಹಾಗೂ ಅನಂತರದ ಸಿದ್ಧರ ಸಂಪ್ರದಾಯಗಳೆಲ್ಲವನ್ನೂ ಒಟ್ಟುಗೂಡಿಸಿ ರೂಪುಗೊಂಡ, ನಾಥ ಪಂಥದಲ್ಲಿ ಹನ್ನೆರಡು ರೀತಿಯ ಕವಲುಗಳುಂಟಾದವು. ಇವುಗಳನ್ನು **'ದ್ವಾದಶ ಪಂಥ' (ಬಾರಾ ಪಂಥ್)** ಎಂದು ಕರೆಯುತ್ತಾರೆ. ಅ ಹನ್ನೆರಡು ಪಂಥಗಳೆಂದರೆ:

೦೧. **ಕಂತರನಾಥ ಪಂಥ:** ಶಿವನಿಂದಲೇ ರೂಢಿಗೆ ಬಂದ ಪ್ರಪ್ರಥಮ ಸಂಪ್ರದಾಯವಾಗಿದ್ದು ಉಳಿದ ಪಂಥಗಳೊಂದಿಗೆ ಸಂಬಂಧ ಹೊಂದಿಲ್ಲ.

೦೨. **ಪಾಗಲ್ ಪಂಥ:** 'ಪೂರನ್ ಭಗತ್' ಎಂತಲೇ ಹೆಸರಾದ ಚೌರಂಗೀನಾಥನಿಂದ ಪ್ರವರ್ತಿತವಾದ ಸಂಪ್ರದಾಯವಾಗಿದೆ.

೦೩. **ರಾವಲ್ ಸಂಪ್ರದಾಯ:** ಇದು ಆಫ್ಘಾನಿಸ್ಥಾನದಲ್ಲಿ ಪ್ರಚಲಿತವಿದ್ದು, ಪಾಗಲ್ ಪಂಥದ ಪ್ರಭಾವದಿಂದ ರೂಪುಗೊಂಡಿದೆ. ರಾವಲರು ಹೆಚ್ಚಾಗಿರುವುದರಿಂದ 'ರಾವಲ್ ಪಿಂಡಿ' ಎಂದೇ ಸ್ಥಳನಾಮ ಬಂದಿದೆ.

೦೪. **ಪಂಖ್ ಪಂಥ:** ಈ ಪಂಥದವರು ಬ್ರಹ್ಮನ ಅನುವರ್ತಿಗಳೆಂದು ಹೇಳಿಕೊಳ್ಳುತ್ತಾರೆ. ಕರ್ನಾಟಕದ ಹಂಡೇ ಕುರುಬರು ಎಂದು ಕರೆಯಲ್ಪಡುವ 'ಹಾಡೀ ಭರಂಗ' ಪಂಥದವರು ಪಂಖ್ ಪಂಥದೊಡನೆ ಸಂಬಂಧ ಹೊಂದಿದ್ದರೆಂದು ತಿಳಿದು ಬಂದಿದೆ.

೦೫. **ಬನ ಪಂಥ:** ಶಿವನಿಂದಲೇ ಸೃಷ್ಟಿಯಾದುದೆಂದು ಈ ಪಂಥದವರು ಹೇಳಿಕೊಳ್ಳುತ್ತಾರೆ. ಇದು ಮಾರವಾಡದಲ್ಲಿ ಪ್ರಚಲಿತದಲ್ಲಿದ್ದು ಯಾರೊಂದಿಗೂ ಬೆರೆಯದೆ ಪ್ರತ್ಯೇಕವಾಗಿ ಉಳಿದಿದೆ.

೦೬. **ಗೋಪಾಲ ಪಂಥ:** ಇದರ ಸಂಸ್ಥಾಪಕ ಸಂತೋಷನಾಥ. ಇದನ್ನು 'ರಾಮಶಾಖೆ' ಎಂತಲೂ ಕರೆಯುತ್ತಾರೆ. .

೦೭. **ಚಾಂದನಾಥ ಕಪಿಲಾನೀ ಪಂಥ:** ಇದರ ಪ್ರವರ್ತಕ 'ಅಜಯಪಾಲ', ಗಂಗಾನಾಥ, ಕಾರ್ಯನಾಥಗಳೆಂಬ ನಾಥ ಶಾಖೆಗಳು ಇದರೊಂದಿಗೆ ಸಂಬಂಧ ಹೊಂದಿವೆ.

೦೮. **ಹೇರನಾಥ ಪಂಥ:** ಪ್ರಸಿದ್ಧ ಯೋಗಿಯಾದ ಲಕ್ಷ್ಮಣನಾಥ ಇದರ ಮೂಲ ಕರ್ತೃ. ಇದು ದರಿಯಾ ಪಂಥ ಮತ್ತು ನಾಟೇಶ್ವರಿಗಳೆನ್ನುವ ಎರಡು ಉಪಶಾಖೆಗಳನ್ನು ಹೊಂದಿದೆ.

೦೯. **ಆ ಈ ಪಂಥ ಕ ಚೋಲಿ ಪಂಥ:** ಗೋರಖನಾಥನಿಂದ ನೇರವಾಗಿ ಪ್ರಭಾವ ಪಡೆದು ಪ್ರವರ್ತನಗೊಂಡ ನಾಥ ಪಂಥವಾಗಿದೆ. **'ಘೋಡಾ ಚೋಲಿ'** ಎಂಬ ಸಾಂಪ್ರದಾಯಿಕ ಹೆಸರೂ ಈ ಪಂಥಕ್ಕಿದೆ. ಮಾತೃದೇವತೆಯಾದ ಆಯಿದೇವಿಯನ್ನು ಪೂಜಿಸುವುದರಿಂದ **'ಆಈ ಪಂಥ'** ಎಂದು ಕರೆದಿದ್ದಾರೆ.

೧೦. **ವೈರಾಗ್ಯ ಪಂಥ:** ಭರ್ತೃಹರಿ ಎನ್ನುವ ಯೋಗಿಯಿಂದ ಸ್ಥಾಪಿಸಲ್ಪಟ್ಟಿದ್ದು.

೧೧. **ಪಾವಾನಾಥರು:** ಇವರು ಜೈಪುರದವರು. ಇದರಲ್ಲಿ ಜಾಲಂಧರಿಪಾ, ಕಾನಿಫಾ ಪದ್ಧತಿಗಳು ಸೇರಿಕೊಂಡಿವೆ. ಜೈಪುರದ ಹಾವಾಡಿಗರು ಕಾನಿಫನನ್ನು ತಮ್ಮ ಗುರುಗಳೆಂದು ಹೇಳಿಕೊಳ್ಳುತ್ತಾರೆ.

೧೨. **ಧಜನಾಥ:** ಹನುಮಂತನ ಅನುಯಾಯಿ ಧಜನಾಥನೇ ಈ ಸಂಪ್ರದಾಯದ ಮೂಲ ಕರ್ತೃ. ಈ ಶಾಖೆಯ ಮೂಲ ನೆಲೆ ಸಿಂಹಳವೆಂದು ಹೇಳುತ್ತಾರೆ.

ಭಾರತದ ಉದ್ದಗಲಕ್ಕೂ ನಾಥಪಂಥಕ್ಕೆ ಸಂಬಂಧಿಸಿದ ಮಠಗಳನ್ನು ಕಾಣಬಹುದು. ಉದಯಪುರದ **'ಲಾದುವಾರ'**, **'ಅಂಗನಾ'**, ಬಂಗಾಳದ **'ಆದಿ'**, ಪೂನಾದ **'ಗಂಭೀರ ಮಠ'**, ಗಿರಿನೂರಿನ **'ಗೋರಕ್ಷ ಕ್ಷೇತ್ರ'**, ವಂಗ ದೇಶದ **'ಗೋರಖಬಂಶೀ'**, **'ಮಹಾನಾಥ ಮಂದಿರ'**, ನಾಸಿಕದ **'ತ್ರ್ಯಂಬಕ ಮಠ'**, ಆಗ್ರಾದ **'ಮಂಗಲೇಶ್ವರ'**, ಬೀಕಾನೇರ್‌ನ **'ನೋಹರ ಮಠ'**, ಮುಂಬೈನ **'ಪಾರಾಧುನಿ'**, ಗ್ವಾಲಿಯರ್‌ನ **'ಗುಫಾ'**, ಜೋಧ್‌ಪುರದ **'ಮಹಾಮಂದಿರ ಮಠ'**, ಜೈಪುರದ **'ಹಿಂಗುಲಿ ಮಠ'**, ಆಂಧ್ರಾದ **'ಶಂಭುನಾಥ ಮಠ'** –ಮೊದಲಾದವು ಪ್ರಮುಖವಾದವುಗಳೆನಿಸಿವೆ.

– ಹೀಗೆ ಭಾರತದ ಪ್ರಾಚೀನ ಭಕ್ತಿ ಪಂಥವೆನಿಸಿಕೊಂಡ ನಾಥಪಂಥ, ಉನ್ನತ ಮೌಲ್ಯಗಳನ್ನು ಆಧರಿಸಿರುವುದರಿಂದ ಅದು ಇನ್ನಿತರ ಭಕ್ತಿ ಪಂಥಗಳ ಮೇಲೆ ಹಾಗೂ ಜನ ಸಾಮಾನ್ಯರ ಮೇಲೆ ಅಗಾಧ ಪ್ರಭಾವ ಬೀರಲು ಸಾಧ್ಯವಾಗಿದೆ.

## ಕರ್ನಾಟಕದಲ್ಲಿ ನಾಥ ಪಂಥ:

ಕರ್ನಾಟಕದಲ್ಲಿ ನಾಥ ಪಂಥ, ೧೧ನೇ ಶತಮಾನಕ್ಕಿಂತಲೂ ಮೊದಲೇ ಪ್ರವೇಶವಾಗಿದೆ ಎಂದು ತಜ್ಞರು ಭಾವಿಸುತ್ತಾರೆ. ನಾಥ ಸಂಪ್ರದಾಯ ಕರ್ನಾಟಕದಲ್ಲಿ ಬೇರೂರಲು ಉತ್ತರ ಭಾರತದಿಂದ ಬಂದ ನಾಥ ಸನ್ಯಾಸಿಗಳೇ ಕಾರಣ. ಅವರ ಕೆಲವು ಸಮಾಧಿಗಳು ಈಗಲೂ ಸ್ಮಾರಕಗಳಾಗಿ ಉಳಿದಿದ್ದು, ಮೋಹರನಾಥ, ಕುರುಕ್ಷೇತ್ರನಾಥ ಎಂಬ ಹೆಸರುಗಳ ಕೆತ್ತನೆಯಿದೆ. ನಾಗರಿ ಲಿಪಿಯ ಶಾಸನ ಕೂಡ ಇರುವುದು ನಾಥ ಪಂಥ ಉತ್ತರ ಭಾರತದಿಂದ ಇಲ್ಲಿಗೆ ಬಂದಿರುವುದರಿಂದ ಪುರಾವೆಯೆನಿಸಿದೆ.[*೦೮]

ಆದಿಚುಂಚನಗಿರಿ ಕನ್ನಡ ನಾಡಿನ ಪ್ರಮುಖ ನಾಥ ಪಂಥದ ಕೇಂದ್ರವಾಗಿದ್ದು ಕ್ರಿ.ಶ ೧೧೭೮ರ ಶಾಸನವೊಂದು ನಾಥ ಪಂಥದ ವಿವರಗಳನ್ನು ಹೇಳುತ್ತದೆ. "ಛಾಯಾ ಪರಮೇಶ್ವರನ ಮಗ ಸ್ತಂಭನಾಥ, ಅವನ ಮಗ ದ್ವೀಪನಾಥ, ಅವನ ಶಿಷ್ಯ ಮೌನಿನಾಥ, ಅವನ ಶಿಷ್ಯ ರೂಪಶಿವ" ಎನ್ನುವ ಸಾಲುಗಳು ನಾಥ ಪಂಥದ ಪರಂಪರೆಯನ್ನು ಹೇಳುತ್ತದೆ. ಹೆಸರಿನೊಂದಿಗೆ **'ನಾಥ'** ವಿಶೇಷಣ ಉಲ್ಲೇಖವಾಗಿರುವುದು ಇಲ್ಲಿನ ವಿಶೇಷವೆನಿಸಿದೆ. ಬೆಳ್ಳೂರಿನಲ್ಲಿ ದೊರೆತಿರುವ ಶಾಸನವೊಂದರಲ್ಲಿ ಭೈರವನ ಸ್ಮರಣೆ ಮಾಡಲಾಗಿದೆ. ಕ್ರಿ.ಶ ೧೨ನೇ ಶತಮಾನಕ್ಕೂ ಮೊದಲೇ ಭೈರವೇಶ್ವರ, ಆ ಪರಿಸರಕ್ಕೆ ಅಧಿದೈವನೆಂದು ಖ್ಯಾತವಾಗಿದ್ದನೆಂದೂ, ರಾಜ ಮಹಾರಾಜರು ಚುಂಚನಗಿರಿಯಲ್ಲಿ ಧಾರ್ಮಿಕ ಸೇವೆ ನಡೆಸಿಕೊಂಡು ಬರುತ್ತಿದ್ದರೆಂದೂ ವಿದ್ವಾಂಸರು ಊಹಿಸಿದ್ದಾರೆ. ಗಂಗರು, ರಾಷ್ಟ್ರಕೂಟರು, ನೊಳಂಬರು, ವೈದುಂಬರರು ಹಾಗೂ ಆವತಿನಾಡ ಪ್ರಭುಗಳೆಂಬ ಕನ್ನಡ ನಾಡಿನ ಸುಪ್ರಸಿದ್ಧ ರಾಜ ಮನೆತನಗಳು **'ಒಕ್ಕಲಿಗ'** ಜಾತಿಗೆ ಸೇರಿದವಾಗಿದ್ದು, ಅವರೆಲ್ಲರೂ ಭೈರವನ ಭಕ್ತರಾಗಿದ್ದರೆಂದು ತಿಳಿದು ಬಂದಿದೆ. ಜನಪದ ಸಂಸ್ಕೃತಿಯ ಮುಖ್ಯ ದೇವರೆನಿಸಿದ ಭೈರವ, ಗ್ರಾಮೀಣ ಪ್ರದೇಶಗಳಲ್ಲಿ ಆಡುನುಡಿಯಲ್ಲಿ ಬೀರ, ಬೋರ, ಬೈರ ಮುಂತಾದ ಹೆಸರುಗಳಿಂದ ಪೂಜೆಗೊಳ್ಳುತ್ತಿದ್ದಾನೆ. ಬೀರೇ ದೇವರು, ಬೈರೇ ದೇವರು, ಬೋರೇ ದೇವರು ಎನ್ನುವ ಹೆಸರುಗಳಿಂದ ಹಲವು ಜನಾಂಗದವರು ಪೂಜಿಸುತ್ತಾ ಬಂದಿದ್ದಾರೆ.

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ **'ಆದಿಚುಂಚನಗಿರಿ'** ಮಠ ಮತ್ತು ಮಂಗಳೂರಿನ **'ಕದರಿ ಮಠ'**ಗಳನ್ನು ಕರ್ನಾಟಕದಲ್ಲಿ ನಾಥ ಪಂಥ ನೆಲೆಯೂರಿರುವ ಪ್ರಮುಖ ನೆಲೆಗಳೆಂದು ಗುರುತಿಸಲಾಗಿದೆ. **ವಿಟ್ಲದ ಗುಹೆ**ಗಳಲ್ಲಿ, **ಕಾಸರಗೋಡಿನ ಪೊಸಡಿ ಗುಂಪೆ ಗುಹೆ**ಗಳಲ್ಲಿ, **ಉತ್ತರ ಕನ್ನಡ ಜಿಲ್ಲೆಯ ಬೇಡಕಿಹಾಳ**ದಲ್ಲಿ, **ಹಾವೇರಿಯ ಕರಜಗಿ**ಯಲ್ಲಿ, **ಬೆಳಗಾವಿಯ ಖಾನಾಪುರದ ಕುಂಬ್ರಾಡ ಅರಣ್ಯ**ಗಳಲ್ಲಿ ನಾಥ ಪಂಥದ ಜೋಗಿಗಳು ವಾಸವಿದ್ದ ಕುರುಹುಗಳು ದೊರೆತಿವೆ. ಉತ್ತರ ಕನ್ನಡ ಜಿಲ್ಲೆ ಕುಮಟಾ ತಾಲ್ಲೂಕಿನ ಆನೆಗುಂದಿ ಸಮೀಪದಲ್ಲಿರುವ ಪ್ರಸಿದ್ಧ ಯಾತ್ರಾ ಸ್ಥಳ

'**ಯಾಣ**'ದಲ್ಲಿ **ಕಾಲಭೈರವೇಶ್ವರ** ದೇವಾಲಯವಿದೆ. ಹೀಗಾಗಿ ಈ ಶಿಖರವನ್ನು **'ಭೈರವೇಶ್ವರ ಶಿಲಾ ಶಿಖರ'** ಎಂದು ಕರೆಯುತ್ತಾರೆ.

ಇವುಗಳಲ್ಲದೆ ಮೈಸೂರಿನ **'ಸೋಮುಖ ಮಠ'**, ಚಿತ್ರದುರ್ಗದ **'ಸಿದ್ಧೇಶ್ವರ ಸ್ವಾಮಿ ಯೋಗಿ ಮಠ'**, ಮೊಳಕಾಲ್ಮೂರಿನ **'ಗಂಗಾಧರೇಶ್ವರ ಸ್ವಾಮಿ ಮಠ'**, ಕದ್ರಿಯ **'ಯೋಗೀಶ್ವರ ಮಠ'**, ಕುಂದಾಪುರದ **'ಹಿಲೋರಿ ಮಠ'**, ಕಾಸರಗೋಡಿನ **'ಉದ್ಯಾವರದ ಜೋಗಿ ಮಠ**'ಗಳನ್ನು ನಾಥ ಪಂಥದ ಮಠಗಳೆಂದು ಗುರುತಿಸುತ್ತಾರೆ.

## ಪ್ರಮುಖ ನಾಥ ಕ್ಷೇತ್ರ: ಆದಿಚುಂಚನಗಿರಿ:

ಶ್ರೀ ಆದಿಚುಂಚನಗಿರಿ ಕ್ಷೇತ್ರವು ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನಲ್ಲಿದೆ. ಕ್ರಿ.ಶ ೯ನೇ ಶತಮಾನದಷ್ಟು ಹಿಂದೆಯೇ ಇದು ನಾಥ ಸಿದ್ಧಾಂತದ ಪ್ರಮುಖ ನೆಲೆಯಾಗಿತ್ತು. ಸುತ್ತಲೂ ದಟ್ಟವಾದ ಕಾಡಿದ್ದು, ನಡು ಭಾಗದಲ್ಲಿ ಎತ್ತರದ ಬೆಟ್ಟವಿರುವುದು, ಪ್ರಕೃತಿಯ ಹಸಿರು ಸದಾ ಕಂಗೊಳಿಸುತ್ತಿರುವುದರಿಂದ ಈ ಕ್ಷೇತ್ರಕ್ಕೆ ತನ್ನದೇ ಆದ ಆಕರ್ಷಣೆಯಿದೆ. ಬಹು ಹಿಂದಿನಿಂದಲೂ ಇಲ್ಲಿ ಅನ್ನದಾನ ನಡೆಯುತ್ತಿದ್ದುದರಿಂದ **'ಅನ್ನದಾನಿ ಮಠ'** ಎಂದೂ ಈ ಕ್ಷೇತ್ರವನ್ನು ಕರೆಯುತ್ತಾರೆ. **'ಭೈರವ ಬೆಟ್ಟ', 'ಚಂದ್ರಗಿರಿ' ಮತ್ತು 'ನಾಗಭೂಷಣ ಗಿರಿ**'ಗಳೆಂತಲೂ ಕರೆದಿರುವುದು – ಈ ಕ್ಷೇತ್ರದ ಹೆಗ್ಗಳಿಕೆಯನ್ನು ತೋರಿಸುತ್ತದೆ.

**'ಭೈರವೇಶ್ವರ'** – ಶ್ರೀ ಕ್ಷೇತ್ರದ ಅಧಿದೈವತೆ, ಪುರಾತನ ಕಾಲದಿಂದಲೂ ಗಂಗ, ಚೋಳ, ಹೊಯ್ಸಳ, ವಿಜಯನಗರ, ಯಲಹಂಕ ನಾಡಪ್ರಭುಗಳು, ಒಡೆಯರು ಮೊದಲಾದ ಅರಸರುಗಳು ಭೈರವೇಶ್ವರನಿಗೆ ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರು. ಅವರುಗಳು ಶ್ರೀ ಮಠಕ್ಕೆ ದಾನ ದತ್ತಿಗಳನ್ನು ನೀಡಿರುವುದಕ್ಕೆ ದಾಖಲೆಗಳಿವೆ. ಇಲ್ಲಿನ ಭೈರವ ಮೂರ್ತಿಯ ಎತ್ತರ ಮೂರು ಅಡಿಯಿದೆ. ಭೈರವ ನಿರ್ವಾಣ ಸ್ಥಿತಿಯಲ್ಲಿದ್ದಾನೆ. ಬಲಭಾಗದ ಕೈಗಳೆರಡರಲ್ಲಿ ತ್ರಿಶೂಲ ಮತ್ತು ಖಡ್ಗವನ್ನೂ, ಎಡಭಾಗದ ಮೇಲೆತ್ತಿದ ಕೈಯಲ್ಲಿ ಢಮರುಗವಿದ್ದು, ತಗ್ಗಿದ ಕೈಯಲ್ಲಿ ರಕ್ತಸಿಕ್ತ ಕಪಾಲವಿದೆ. ಕಪಾಲದಿಂದ ತೊಟ್ಟಿಕ್ಕುತ್ತಿರುವ ರಕ್ತಕ್ಕೆ ನಾಯಿಯೊಂದು ಮುಖವೆತ್ತಿ ನಾಲಿಗೆ ಚಾಚಿರುವಂತೆ ಕೆತ್ತನೆ ಮಾಡಲಾಗಿದೆ.

ಧ್ಯಾನ ಮಂದಿರದ ಬಳಿ ಇರುವ **'ಜ್ವಾಲಾಪೀಠ'** ಚುಂಚನಗಿರಿಯ ಹೃದಯ ಭಾಗವೆಂದೇ ಹೇಳಬೇಕು. ಇದನ್ನು **'ಉರಿಗದ್ದುಗೆ'** ಎಂತಲೂ ಕರೆಯುತ್ತಾರೆ. ಆದಿರುದ್ರನಾದ ಪರಶಿವನು ಇದೇ ಜಾಗದಲ್ಲಿ ತಪಸ್ಸಿಗೆ ಕುಳಿತಿದ್ದನೆಂದು ಹೇಳುತ್ತಾರೆ. ಶಿವನೇ ಈ ಸಿದ್ಧಪೀಠ ಸ್ಥಾಪಕನಾಗಿದ್ದಾನೆ. ಈಗಲೂ ಇದರ ಮೇಲೆ ಸಾಸುವೆ ಹಾಕಿದರೆ ಸಿಡಿಯುತ್ತದೆ ಎನ್ನುವ ನಂಬಿಕೆ ಇದೆ. ಹಬ್ಬ-ಉತ್ಸವಗಳಲ್ಲಿ ಮಠಾಧಿಪತಿಗಳು ಈ ಪೀಠದಲ್ಲಿ ಕುಳಿತು ಭಕ್ತರಿಗೆ ದರ್ಶನ ನೀಡುತ್ತಾರೆ. ಇದನ್ನು **'ಜ್ವಾಲಾಪೀಠಾರೋಹಣ'** ಎನ್ನುತ್ತಾರೆ.

ಉರಿಗದ್ದುಗೆಯ ಎಡಭಾಗಕ್ಕೆ **‘ಸಿದ್ಧ ಸಿಂಹಾಸನ’**ವಿದೆ. ಶ್ರೀ ಮಠದ ಅಧಿಪತಿಗಳೆಂದು ಕರೆಯಿಸಿಕೊಂಡವರು ಈ ಪೀಠದಲ್ಲಿ ಕುಳಿತುಕೊಳ್ಳುತ್ತಾರೆ. ಈ ಹಿಂದೆ ೭೦ ಪೀಠಾಧಿಪತಿಗಳು ಇದರ ಮೇಲೆ ಕುಳಿತಿದ್ದು, ಪ್ರಸ್ತುತ **ಶ್ರೀಬಾಲಗಂಗಾಧರರು** ೭೧ನೇ ಪೀಠಾಧೀಶರಾಗಿದ್ದು **‘ಸಿದ್ಧ ಸಿಂಹಾಸನ’**ಸ್ಥರಾಗಿ ಅಭಿಷಿಕ್ತರಾಗಿದ್ದಾರೆ. ಜಾತ್ರೆ–ಮಹೋತ್ಸವಗಳಲ್ಲಿ ಬಾಲಗಂಗಾಧರರು ಸಿಂಹಾಸನ ಅಲಂಕರಿಸುವುದು ರೂಢಿ.

**‘ನಾಗಚಾವಡಿ’** ಎಂಬ ಸ್ಥಳದಲ್ಲಿ ಪುರಾತನ ಕಾಲದ ಸಿದ್ಧಯೋಗಿಗಳು ಹೋಮಗಳನ್ನು ನಡೆಸುತ್ತಿದ್ದರೆಂದು ಹೇಳುತ್ತಾರೆ. ಇಂದಿಗೂ ಕೂಡ ಅಲ್ಲಿ ಅಗ್ನಿ ಕುಂಡವಿರುವುದನ್ನು ಕಾಣಬಹುದು. ಉರಿಗದ್ದುಗೆಯ ಸಮೀಪದ ತಪೋಗೃಹದಲ್ಲಿ ಒಂದು ಸುರಂಗ ಮಾರ್ಗವಿದೆ. ಅದು ಆಲತಿಗಿರಿಗೆ, ಶಿವಗಂಗೆಗೆ ಹೋಗುವ ದಾರಿ ಎಂದು ಹೇಳುತ್ತಾರೆ.

**“ಚಂದ್ರಮೌಳೇಶ್ವರ ಸ್ವಾಮಿ”** ಮತ್ತು **“ಅನ್ನಪೂರ್ಣೇಶ್ವರಿ”** ಹಾಗೂ ಇತರ ದೇವತಾ ವಿಗ್ರಹಗಳಿರುವ ಪವಿತ್ರ **“ಧ್ಯಾನ ಮಂದಿರ”ವೊಂ**ದು ಇದೆ. ಇಲ್ಲಿ ಶ್ರೀ ಮಠದ ಪೀಠಾಧಿಪತಿಗಳು ಧ್ಯಾನ ಮಗ್ನರಾಗುತ್ತಾರೆಂದು ಹೇಳುತ್ತಾರೆ. **“ಗಂಗಾಧರೇಶ್ವರ ದೇವಾಲಯ”** ಇಲ್ಲಿನ ಮತ್ತೊಂದು ಆಕರ್ಷಣೆ. ಈ ದೇವಾಲಯವನ್ನು ಚೋಳರು ಕಟ್ಟಿಸಿದ್ದೆಂದು ಹೇಳುತ್ತಾರೆ. ಸುಮಾರು ೩೮ ಕಲ್ಲು ಕಂಬಗಳನ್ನು ಹೊಂದಿರುವ ಈ ದೇವಾಲಯ ಮುಖ ಮಂಟಪ, ಆಸ್ಥಾನ ಮಂಟಪ, ನವರಂಗಕ್ಕೆ ಭವ್ಯತೆಯನ್ನು ನೀಡಿವೆ. ಗುಹೆಯೊಳಗಿನ ದೇವಾಲಯವೊಂದು ಮನಸ್ಸನ್ನಾಕರ್ಷಿಸುತ್ತದೆ. ಅದೇ **‘ಗವಿ ಸಿದ್ಧೇಶ್ವರ ಲಿಂಗ’**. ಗುಹೆಯ ಮಧ್ಯದಲ್ಲಿ ಲಿಂಗವಿದೆ. ಪಕ್ಕದಲ್ಲಿ **‘ಬಂಜೆ ಬಸವ’** ಎನ್ನುವ ಕೈಯಲ್ಲಿ ಎತ್ತಬಹುದಾದ ಬಸವನ ವಿಗ್ರಹವಿದೆ. ಇದನ್ನು ಕೈಯಲ್ಲಿ ಹಿಡಿದು ಗವಿ ಸಿದ್ಧೇಶ್ವರ ಲಿಂಗವನ್ನು ಮೂರು ಸುತ್ತು ಬಂದರೆ ಬಂಜೆಯರಿಗೆ ಮಕ್ಕಳ ಫಲ ದೊರೆಯುವುದೆನ್ನುವುದು ಜನಜನಿತ ನಂಬಿಕೆಯಾಗಿದೆ.

ಶ್ರೀ ಬಾಲಗಂಗಾಧರನಾಥರ ನೇತೃತ್ವದಲ್ಲಿ ಇಲ್ಲಿ ಪಂಚಗೋಪುರದ, **ಶ್ರೀ ಕಾಲಭೈರವೇಶ್ವರ ದೇವಾಲಯ**ವನ್ನು ಬೃಹತ್ತಾಗಿ ನಿರ್ಮಿಸುತ್ತಿದ್ದಾರೆ. ಕಟ್ಟಡವು ನಿರ್ಮಾಣ ಹಂತದಲ್ಲಿದ್ದು ಶ್ರೀಕ್ಷೇತ್ರದ ಘನತೆಯನ್ನು ಹೆಚ್ಚಿಸುವಂಥದ್ದಾಗಿದೆ.

**ಚುಂಚಾದ್ರಿ ಚಂದ್ರಿಕೆಯಲ್ಲಿ ನಾಥ ಪಂಥದ ವಿವರ:**

ಚುಂಚಾದ್ರಿ ಚಂದ್ರಿಕೆಯ ಸಂಚಿಕೆ–೭ರ, **‘ಮೆಚ್ಚಿದನು ಶಿವ ತಪಸಿ ಮಚ್ಚೇಂದ್ರನ’** ಅಧ್ಯಾಯದಿಂದ **‘ನಾಥ ಪಂಥ’**ದ ವಿಚಾರಗಳನ್ನು ಹೇಳಲು ಕವಿ ಮುಂದಾಗುತ್ತಾರೆ. ನಾಥ ಪಂಥದ ಪ್ರಮುಖ ವ್ಯಕ್ತಿಯಾದ ಮಚ್ಚೇಂದ್ರನಾಥನು ಮೀನಿನ ಗರ್ಭದಲ್ಲಿ ಹುಟ್ಟುವ ಸನ್ನಿವೇಶ ವರ್ಣಿಸುತ್ತಾ ಕವಿ, **“ಮುನಿದೇವ ಮಧುರ ಕವಿ ನಾರಾಯಣ ಮನೋಜ್ಞ, ಬೆಳೆದ ಅಂಬೆ ಮತ್ಸ್ಯದ ಗರ್ಭದಲ್ಲಿ”** ಎಂದಿದ್ದಾರೆ. ಕವಿ ನಾರಾಯಣರೇ, ಮಚ್ಚೇಂದ್ರನಾಥನಾಗಿ ಜನ್ಮ ತಳೆದರೆನ್ನುವ ಮಾಹಿತಿ ಇಲ್ಲಿ

ಉಕ್ತವಾಗಿದೆ. ಆತ ಬಾಲಕನಾಗಿದ್ದಾಗ, ಶಿವನನ್ನು ಕುರಿತು ಘೋರ ತಪಸ್ಸಾಚರಣೆಯಲ್ಲಿ ತೊಡಗಿರುವುದನ್ನು ಹೇಳುತ್ತಾ,

> **"ಕರಿ ಹಿಂಡು ಕಾಳಾಹಿ ಖಡ್ಗಮೃಗ ಕರಡಿಗಳು**
> **ಮಚ್ಚೇಂದ್ರ ಮಗುವನ್ನು ಹೆದರಿಸಿದವು**
> **ಶಾರ್ದೂಲ ಸಿಂಹಗಳು ಹುಲಿ ಚಿರತೆ ಹೇರಾನೆ**
> **ಕಾಡ್ಕೋಣ ಕಿರುಬಗಳು ಬೆದರಿಸಿದವು".**

ಎನ್ನುತ್ತಾರೆ. ಸಹಜ ವರ್ಣನೆಗೆ ಈ ಪದ್ಯ ಸಂಕೇತವಾಗಿದೆ. ಘೋರ ತಪಸ್ಸಿಗೆ ಮರುಳಾದ ಶಿವ ಪ್ರತ್ಯಕ್ಷನಾಗಿ **'ಬದರಿಯಲ್ಲಿ ನಿನಗೆ ಮಂತ್ರೋಪದೇಶ'** ಮಾಡುತ್ತೇನೆನ್ನುತ್ತಾನೆ. ಅಂಬೆಯ ಆರೈಕೆಯಲ್ಲಿ ಬೆಳೆದ ಮಚ್ಚೇಂದ್ರ **'ಮಾತೆಯಿಂ ಮುನಿ ವೇದಗಳನ್ನು ತಿಳಿದ'**. ಬದರಿಯಲ್ಲಿ ಮಚ್ಚೇಂದ್ರ ಪರಶಿವನಿಂದ ಮಂತ್ರೋಪದೇಶಕ್ಕೆ ಒಳಗಾಗುತ್ತಾನೆ. ಶಿವ ಮಂತ್ರದ ಮಹತ್ವವನ್ನು ಸಾರಲು ಆತ ನೇಪಾಳಕ್ಕೆ ಹೋಗುತ್ತಾನೆ. **"ಶಿಷ್ಯರನ್ನು ಸಂಘಟಿಸಿ ಮಠಗಳನು ಮೋದದಿಂ ಸ್ಥಾಪಿಸುತ ಸೃಷ್ಟಿಸಿದ ನಾಥ ಪಂಥ"** – ಈ ಮಾತಿನ ಪ್ರಕಾರ ಮಚ್ಚೇಂದ್ರನೇ ನಾಥ ಪಂಥದ ಮೂಲ ಕರ್ತೃ ಎನ್ನುವ ಸತ್ಯ ಕಾಣಸಿಗುತ್ತದೆ. "ಮಚ್ಚೇಂದ್ರ ವಂಗ ದೇಶಕ್ಕೆ ಭೇಟಿ ಕೊಟ್ಟಾಗ ಗುಣವತಿ ಎನ್ನುವ ಮಕ್ಕಳಿಲ್ಲದ ಬಂಜೆಗೆ ಮಂತ್ರಿಸಿದ ಭಸ್ಮ ನೀಡುತ್ತಾನೆ. ಭಸ್ಮದಲ್ಲೇನೋ ಮೋಸವಿದೆ ಎಂದು ಭಾವಿಸಿದ ಗುಣವತಿ, ಅದನ್ನು ತಿಪ್ಪೆ ಗುಂಡಿಗೆ ಎಸೆಯುತ್ತಾಳೆ. ಮಚ್ಚೇಂದ್ರ ಸಿಂಹಳದ ಸೇತುಬಂಧದ ಬಳಿಗೆ ಹೋದಾಗ, ಮಾರುತಿಗೂ ಆತನಿಗೂ ಸಂಘರ್ಷವೇರ್ಪಡುತ್ತದೆ. ಮಾರುತಿ ತನ್ನ ದಿವ್ಯ ರೂಪ ತೋರಿದಾಗ, ಮಚ್ಚೇಂದ್ರ ವಿಧಿಯಿಲ್ಲದೆ ಶರಣಾಗಬೇಕಾಗುತ್ತದೆ. ಮಾರುತಿ, "ನಿಜಯೋಗಿ ನೀನಿರುವೆ ಮಚ್ಚೇಂದ್ರ ಮುನಿವರ್ಯ ಲಲನೆಯರ ಲೋಕದಲಿ ನೀನು ನೆಲೆಸು" ಎಂದು ಆಶೀರ್ವಾದಿಸುತ್ತಾನೆ. ಭಗವತಿಯ ದರ್ಶನಕ್ಕೆ ಹೋದಾಗ ಭೈರವರು ತಡೆಯುತ್ತಾರೆ. ತನ್ನ ಶಕ್ತಿ ಪ್ರದರ್ಶನದಿಂದ ಭಗವತಿಯನ್ನು ಮೆಚ್ಚಿಸಿ ಆಶೀರ್ವಚನಗಳನ್ನು ಆತ ಪಡೆಯುತ್ತಾನೆ. ಭದ್ರಕಾಳಿಯಿಂದ ಕಾಳಿಕಾಸ್ತ್ರ ಪಡೆದು, ವೀರಭದ್ರನನ್ನೆದುರಿಸಿ, ಶಿವ–ಬ್ರಹ್ಮ–ವಿಷ್ಣು ಮೊದಲಾದ ದೇವಗಣಗಳ ಆಶೀರ್ವಚನ ಪಡೆಯುತ್ತಾನೆ. ಸರಸ್ವತಿಗೆ ಬಂಜೆತನ ತೊಲಗಿಸುವ ಭಸ್ಮ ನೀಡುವಾಗ, ವಂಗ ದೇಶದ ಗುಣವತಿಗೆ ಭಸ್ಮ ನೀಡಿದ್ದನ್ನು ನೆನಸಿಕೊಳ್ಳುತ್ತಾನೆ. ವಂಗ ದೇಶಕ್ಕೆ ನೇರ ಹೋದ ಮಚ್ಚೇಂದ್ರ ತಿಪ್ಪೆ ಗುಂಡಿಯ ಬಳಿಯಲ್ಲಿ ನಿಂತು **'ಬಾ ಹಸುಳೆ ಬಾ'** ಎಂದು ಕರೆದಾಗ, ತಪಸ್ಸಿನಲ್ಲಿ ತೊಡಗಿದ್ದ ಶಿಶುವೊಂದು ಹೊರಬಂದಾಗ, ಅದನ್ನು **'ಗೋರಕ್ಷ'**ನೆಂದು ಕರೆಯುತ್ತಾನೆ. ಗೊಬ್ಬರದ ಗುಂಡಿಯಲ್ಲಿ ಬೆಳೆದ ಮಗುವಿಗೆ **'ಗೋರಕ್ಷ'**ನೆಂದು ಹೆಸರಿಸಿರುವುದು ವಿಶೇಷವೆನಿಸುತ್ತದೆ. **'ಗೋರಕ್ಷ'**ನನ್ನು **'ಗೋರಖ'**ನೆಂದೂ ಕರೆಯುತ್ತಾರೆ.[*೦೯] .

ಗೋರಖನು ಮಣ್ಣಿನಿಂದ ಗೊಂಬೆಯೊಂದನ್ನು ಮಾಡಿ, ಸಂಜೀವಿನಿ ಶಕ್ತಿಯಿಂದ ಅದಕ್ಕೆ ಜೀವ ತುಂಬಿ ಬಂಜೆಯ ಒಡಲಿಗೆ ಸೇರಿಸಿ, ಗಹನ ಮುನಿಯೆಂದು ಹೆಸರಿಸುತ್ತಾನೆ. ಮಚ್ಚೇಂದ್ರನು

ಸ್ತ್ರೀರಾಜ್ಯ ಪ್ರವೇಶಿಸಿ, ಅಲ್ಲಿನ ಸ್ತ್ರೀಯರೊಂದಿಗೆ ಭೋಗ ಜೀವನ ನಡೆಸಿ ಮೈಮರೆಯುತ್ತಾನೆ: ಇದನ್ನು ಕವಿ ವರ್ಣಿಸುವುದು ಹೀಗೆ:

**"ಮತ್ತೆ ಮುನಿ ಮಚ್ಚೇಂದ್ರ ತೆರಳುತ್ತ ತರಳೆಯರ**
**ರಾಜ್ಯದಲಿ ರಾಣಿಯನು ತಾ ರಮಿಸಿದ**
**ಸತಿಯೊಡನೆ ಸಂತಸದ ಸಲ್ಲಾಪ ಶರಧಿಯಲಿ**
**ಮುನಿವರ್ಯ ಮಿಂದು ಜಗ ಮರೆತು ಮೆರೆದ"**

ಬೃಹದ್ರವನ ಪತ್ನಿಯು ಬಂಜೆತನದಿಂದ ನೊಂದಿರಲು, ಮುನಿಗಳು ಮಹಾಯಜ್ಞವನ್ನು ನಡೆಸುತ್ತಾರೆ. ಯಜ್ಞಕುಂಡದಿಂದಲೇ ಉದ್ಭವಿಸಿದ ಬಾಲಕನನ್ನು ಕಂಡು ಮುನಿಗಳು **'ಜಾಲಂಧರ'**ನೆಂದು ಹೆಸರಿಸುತ್ತಾರೆ. ಬ್ರಹ್ಮನ ಮಗನು ಆನೆಯ ಕಿವಿಯಲ್ಲಿ ಜನಿಸಿದ್ದರಿಂದ **'ಕಾನಿಫ'**ನೆಂದು ಹೆಸರು ನಿಲ್ಲುತ್ತದೆ. ಕಾನಿಫ, ಜಾಲಂಧರನ ಶಿಷ್ಯನಾಗುತ್ತಾನೆ. ಜಾಲಂಧರ ಬಂಗಾಳದ ಗುಣವಂತೆ ಮನೆಗೆ ಹೋದಾಗ, ಅವಳ ಮಗ ಗೋಪೀಚಂದ್ರ ಜಾಲಂಧರನು ಒಬ್ಬ ಲಂಪಟನೆಂದು ಮುನಿದು ಅವನನ್ನು ಗೊಬ್ಬರದ ಗುಂಡಿಯಲ್ಲಿ ಹೂತುಬಿಡುತ್ತಾನೆ. ಕಾನಿಫನ ಸಹಾಯದಿಂದ ಜಾಲಂಧರ, ಗೊಬ್ಬರದ ಗುಂಡಿಯಿಂದ ಎದ್ದು ಬಂದು, ಗೋಪಿಚಂದ್ರನನ್ನು ಕ್ಷಮಿಸಿ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ.

ಮಚ್ಚೇಂದ್ರನು ಸ್ತ್ರೀ ರಾಜ್ಯದಲ್ಲಿ ಮುಳುಗಿ ಮೈನಾಕಿನಿಯನ್ನು ವರಿಸಿ **'ಮೀನನಾಥ'**ನ ಸೃಷ್ಟಿಗೆ ಕಾರಣನಾಗುತ್ತಾನೆ. ಗೋರಖನ ಒತ್ತಾಯದ ಮೇರೆಗೆ ಮಚ್ಚೇಂದ್ರ **'ಸ್ತ್ರೀ ರಾಜ್ಯ'** ಬಿಡುತ್ತಾನೆ. ಸೂರ್ಯಾಂಶ ಸಂಭೂತನಾದ ಭರ್ತೃಹರಿಯು ಪತ್ನಿ ಪಿಂಗಳೆಯೊಂದಿಗೆ ಭೋಗ ಜೀವನ ನಡೆಸುತ್ತಿರುತ್ತಾನೆ. ಪತಿಭಕ್ತಿಯನ್ನು ಪರೀಕ್ಷಿಸಲೆತ್ನಿಸಿದ ಭರ್ತೃಹರಿ ಪಿಂಗಳೆಯ ಪತಿ ತೀರಿಹೋದನೆಂದು ಪ್ರಚಾರ ಮಾಡಿದ. ಆಗ ಪಿಂಗಳೆ ತನ್ನನ್ನು ತಾನು ಅಗ್ನಿಗಾಹುತಿ ಮಾಡಿಕೊಳ್ಳುತ್ತಾಳೆ. ಆಕೆಯ ಪತಿಭಕ್ತಿ ಕಂಡು ಪಶ್ಚಾತ್ತಾಪದಿಂದ ನೊಂದ ಭರ್ತೃಹರಿಯನ್ನು ಭೇಟಿಯಾದ ದತ್ತಮುನಿ ಐಹಿಕ ಸುಖದ ಕ್ಷಣಿಕತೆಯನ್ನು ಮನವರಿಕೆ ಮಾಡಿಕೊಡುತ್ತಾನೆ.

**"ವಿರಿಂಚಿಯ ವೀರ್ಯದಿಂ ಉರಗದಲಿ ಜನಿಸಿದ" ನಾಗನಾಥ,** ದತ್ತನಿಂದ ಶಿವಶಕ್ತಿ ಸಂಯೋಗ ಮಹಾಸ್ತ್ರದ ಮಂತ್ರಗಳನ್ನು ಕಲಿತನು. ಒಮ್ಮೆ ಮಚ್ಚೇಂದ್ರನು ನಾಗನಾಥನನ್ನು ನೋಡಲು ಬಂದಾಗ, ಕಾವಲುಗಾರರು ತಡೆಯುತ್ತಾರೆ. ಇದರಿಂದ ಕೋಪಗೊಂಡ ಮಚ್ಚೇಂದ್ರ, ಸೆಣೆಸಲುದ್ಯುಕ್ತನಾಗಿ ನಾಗನಾಥನೊಂದಿಗೆ ಹೋರಾಡಿ ಸೋಲನುಭವಿಸುತ್ತಾನೆ. ಮಚ್ಚೇಂದ್ರ ದತ್ತಮುನಿಯನ್ನು ನೆನೆಸಿಕೊಂಡಾಗ, ನಾಗನಾಥ ಅವನನ್ನು ಬಂಧುವೆಂದೇ ಭಾವಿಸಿ ಸತ್ಕರಿಸುತ್ತಾನೆ.

**ಚರ್ಪಟನಾಥ**ನು ಚತುರ್ಮುಖನಂಶದಿಂದ ಜನಿಸಿದವನು. ದತ್ತಮುನಿಯಿಂದ ವಿದ್ಯೆ ಕಲಿತು ಯೋಗಿ ಎನಿಸಿದವನು. ನಾರದನು ಈತನನ್ನು ಸಹೋದರನಂತೆ ಕಂಡು **'ಗಮನ ವಿದ್ಯೆ'** ಹೇಳಿಕೊಡುತ್ತಾನೆ. ಇಂದ್ರನು ಒಮ್ಮೆ ನಾರದನನ್ನು ನಿಂದಿಸಿದಾಗ, ಚರ್ಪಟನಾಥನು ನಂದನವನದ ಹೂ ಹಣ್ಣುಗಳನ್ನೆಲ್ಲ ಎಳೆದು ನಾಶ ಮಾಡುತ್ತಾನೆ. ಸುರಪತಿಯು ಸುರರಿಗೆ ಆಜ್ಞಾಪಿಸಿ

ಚರ್ಪಟನಾಥನನ್ನು ತಲೆ ಮುಡಿ ಹಿಡಿದು ಎಳೆತರಲು, ಮುನಿಯು ದೇವತೆಗಳೆದುರಾಗಿ ಸೆಣಸಿ ಗೆಲ್ಲುತ್ತಾನೆ. ಹರಿಹರರುಗಳಿಂದ ಹೊಗಳಿಸಿಕೊಳ್ಳುತ್ತಾನೆ.

**"ಯೋಗಿ ಸಂಪ್ರದಾಯ ನಿಷ್ಕೃತಿ"**ಯಲ್ಲಿ ನವನಾಥರ ಪ್ರಸ್ಥಾಪ ಬಂದಿದೆ. **ನವನಾರಾಯಣರೇ ನವನಾಥರಾ**ಗಿ ಮಾರ್ಪಾಟಾದ ಸಂಗತಿ ಇಲ್ಲಿ ಕಾಣಿಸಿಕೊಂಡಿದೆ:

**೦೧. ಕವಿ ನಾರಾಯಣ > ಮತ್ಸೇಂದ್ರನಾಥ**

**೦೨. ಕರಭಾಜನ ನಾರಾಯಣ > ಗಹನೀನಾಥ**

**೦೩. ಅಂತರಿಕ್ಷ ನಾರಾಯಣ > ಜಾಲಂಧರನಾಥ**

**೦೪. ಪ್ರಬುದ್ಧ ನಾರಾಯಣ > ಕಾನಿಫಾನಾಥ**

**೦೫. ಆವಿರ್ಹೋತ್ರ ನಾರಾಯಣ > ನಾಗನಾಥ**

**೦೬. ಪಿಪ್ಪಲಾಯ್ಕನ ನಾರಾಯಣ > ಚರ್ಪಟನಾಥ**

**೦೭. ಚಮನಸ ನಾರಾಯಣ > ರೇವನಾಥ (ರೇವಣನಾಥ)**

**೦೮. ಹರಿ ನಾರಾಯಣ > ಭರ್ತೃನಾಥ (ಭರ್ತೃಹರಿ)**

**೦೯. ದ್ರಮಿಲ ನಾರಾಯಣ > ಗೋಪೀಚಂದ್ರ** *೧೦

ಈ ನವನಾಥರು ಎಂಭತ್ತು ನಾಲ್ಕು ಸಿದ್ಧರನ್ನು ಸೃಷ್ಟಿಸಿ ಸಕಲ ದೇಶಗಳಲ್ಲೂ ಧರ್ಮ ಸಾರಲು, ಶಿಷ್ಯರುಗಳನ್ನು ನೇಮಿಸಿದರು. ಸಿದ್ಧಮುನಿಗಳು ದೇಶದಾದ್ಯಂತ ಸಂಚರಿಸಿ ರುದ್ರಮಠಗಳನ್ನು ಸ್ಥಾಪಿಸಿ, ನಾಥಪಂಥದ ಪ್ರಚಾರಕ್ಕೆ ಮುಂದಾದರು.

ಹೀಗೆ ಸಿದ್ಧಮುನಿಯೊಬ್ಬ ಧರ್ಮ ಸಾರುತ್ತ ಆದಿಚುಂಚನಗಿರಿಯತ್ತ ಬರುತ್ತಾನೆ. ಸಿದ್ಧಮುನಿ **"ಪ್ರಾರ್ಥಿಸಿದ ಪರಮ ಶಿವ ಶಿವೆಯರನು / ಪೂಜಿಸುತ ಪ್ರಶ್ರಯದ ಹೂಗಳಿಂದ / ಅರ್ಪಿಸಿದ ಭಕ್ತಿಮಯ ಭೋಜನವ / ಸತ್ಕರಿಸಿ ಶಿವಸೇನೆ ಪಣ್ಗಳಿಂದ"**. ಶಿವ-ಶಿವೆಯರು ಚುಂಚಾದ್ರಿಯಲ್ಲಿ ಪ್ರತ್ಯಕ್ಷವಾಗಿ ಸಿದ್ಧಮುನಿ ಕಂಡು

**"ಸಿದ್ಧಮುನಿ ಸಂತ ಯತಿ ನನ್ನಂಶ ನೀನಿರುವೆ**
**ಸಾರಿರುವೆ ಸತ್ಯವನು ಈ ಧರೆಯಲಿ**
**ಸಾಧಿಸುತ ಸಿದ್ಧಿಯನು ಸ್ಥಾಪಿಸೈ ಸಿದ್ಧರ್ಗೆ**
**ನಾಥರ್ಗೆ ನೀ ಮಠವ ಈ ಗಿರಿಯಲಿ"**

ಎಂದು ಹರಸುತ್ತಾರೆ. **"ಸಿದ್ಧಮುನಿ ! ಸಿಂಹಾಸನವನೇರು ನೀ ಮುದದಿ / ಗುರುವಾಗು ಗಿರಿಯಲ್ಲಿ ಜ್ಞಾನದಾನಿ"** ಎಂದೂ ಮಾರ್ಗದರ್ಶನವೀಯುತ್ತಾರೆ. ಸಿದ್ಧಮುನಿ ಶಿವನ ಅಣತಿಯಂತೇ ನಡೆದುಕೊಳ್ಳುವುದಾಗಿ ಭರವಸೆ ನೀಡುತ್ತಾನೆ.

ಇತ್ತ ಭೈರವನು **'ಬೊಮ್ಮಾಂಡ'**ವನ್ನೇ ಸುತ್ತುತ್ತಾ ಎಲ್ಲ ಲೋಕಗಳಲ್ಲೂ ಶಾಂತಿಯನು ಸ್ಥಾಪಿಸುತ್ತಾ, ಕಡೆಗೆ ಚುಂಚಾದ್ರಿಗೆ ಬರುತ್ತಾನೆ. ಅಲ್ಲಿನ ಶಿವಶಿವೆಯರನ್ನು ಕಂಡು **"ಭೈರವನು ಬಾಗಿ ನಮಿಸುತ್ತ ಭಕ್ತಿಯಿಂ ಭಜಿಸಿದನು"**. ಭೈರವನನ್ನು ಕಂಡು ಅಲ್ಲಿದ್ದ ಸಿದ್ಧಮುನಿ, ನಾಥಮುನಿ ಯಜ್ಞರು

ವಿನಯದಿಂದ ಗೌರವ ತೋರಲು, ಭೈರವ ಅವರನ್ನು ಹರಸುತ್ತಾನೆ. **"ಭೈರವನೆ ಭವರಹಿತ! ನನ್ನಂಶ ನೀನಿರುವೆ /ನೆಲೆಸುತ್ತ ನೀ ಹರಸು ಭಕ್ತರನ್ನು"** ಎಂದು ಶಿವನು ಭೈರವನನ್ನು ಹರಸುತ್ತಾನೆ. **"ಪಾಲಿಪೆನು ಪರಮೇಶ ನಿನ್ನಾಜ್ಞೆ ನಿಜಮನದಿ / ಆಶ್ರಿತರ ಆದರದಿ ನಾ ಸಲಹುತ / ನೆಲೆಸುವೆನು ನಾ ಚುಂಚನಗಿರಿಯ ನಿತಂಬದಿ / ನಿಸರ್ಗದ ನೀರವದ ರಸ ಸವಿಯುತ"** ಎಂದು ಶಿವ-ಶಿವೆಯರಿಗೆ ಭೈರವ ಮಾತು ನೀಡುತ್ತಾನೆ. ಭೈರವನು ಚುಂಚನಗಿರಿಯ ಸಿದ್ಧ ಸಿಂಹಾಸನಕ್ಕೆ ಸಿದ್ಧ ಮುನಿಗೇ ಪಟ್ಟಕಟ್ಟುತ್ತಾನೆ. ಸಿದ್ಧ ಮುನಿ **"ನೇಮಿಸಿದ ನಾಥರನು, ಸಿದ್ಧರನು, ಸಂತರನು ಶಾಖೆಗಳ ಪೀಠಗಳಿಗೆ"**, ಸಿದ್ಧಮುನಿ ಊರೂರು ಸಂಚರಿಸಿ,

> **"ಸತ್ಯಕಿಂ ಶ್ರೇಷ್ಠತಮ ತಪವೊಂದು ತಾನಿಲ್ಲ**
> **ದಾನಕಿಂ ಧರ್ಮ ಜಗದಲ್ಲೇ ಇಲ್ಲ**
> **ಮಿಥ್ಯಕಿಂ ಮೃತ್ಯುಮಯ ಪಾಪಾಗ್ನಿ ಪುಟ್ಟಿಲ್ಲ**
> **ಆಸೆಗಿಂ ಅತಿದುಃಖ ಬೇರೆಯಿಲ್ಲ"**

-ಎಂದು ಭೋದನೆ ಮಾಡುತ್ತ ಹೋದನು. ಕೆಲವು ದಿನಗಳ ನಂತರ, ಕರ್ಮನಾಥನೆಂಬ ವ್ಯಕ್ತಿಗೆ ಪಟ್ಟ ಕಟ್ಟಿ ತಾನು ಸಿಂಹಾಸನ ತ್ಯಜಿಸುತ್ತಾನೆ. ಹೀಗೆ ಆದಿರುದ್ರನಿಂದ ಆರಂಭವಾದ ಈ ಗುರು ಪರಂಪರೆ ಇಂದಿನ ಶ್ರೀ ಬಾಲಗಂಗಾಧರನಾಥರವರೆಗೂ ಹರಿದುಕೊಂಡು ಬಂದಿದೆ. ಅದರ ಕ್ರಮಾನುಕ್ರಮಣಿಕೆ ಹೀಗಿದೆ:

**ಶ್ರೀಆದಿರುದ್ರ - ಶ್ರೀಸಿದ್ಧಯೋಗಿ - ಶ್ರೀಕರ್ಮನಾಥ - ಶ್ರೀಶಿವನಾಥ - ಶ್ರೀಹರಿನಾಥ- ಶ್ರೀಬ್ರಹ್ಮನಾಥ - ಶ್ರೀಗಿರಿಜಾನಾಥ - ಶ್ರೀಲಕ್ಷ್ಮೀನಾಥ - ಶ್ರೀವಾಣಿನಾಥ - ಶ್ರೀಸೋಮನಾಥ - ಶ್ರೀಭೌಮನಾಥ - ಶ್ರೀಸೌಮ್ಯನಾಥ - ಶ್ರೀಗುರುನಾಥ - ಶ್ರೀಭಾರ್ಗವನಾಥ - ಶ್ರೀಮಂದನಾಥ - ಶ್ರೀತಮೋನಾಥ - ಶ್ರೀಕೇತುನಾಥ - ಶ್ರೀವಜ್ರನಾಥ - ಶ್ರೀಆಜ್ಞೇಯನಾಥ - ಶ್ರೀಕಾಲನಾಥ - ಶ್ರೀನಿರುರುತಿನಾಥ - ಶ್ರೀಸಿಂಧುನಾಥ - ಶ್ರೀಪವನನಾಥ - ಶ್ರೀಕುಬೇರನಾಥ - ಶ್ರೀಈಶ್ವರನಾಥ - ಶ್ರೀಧರಣಿನಾಥ - ಶ್ರೀಮೇಘನಾಥ - ಶ್ರೀಕೈಲಾಸನಾಥ - ಶ್ರೀಕ್ಷೀರಾಬ್ಧಿನಾಥ - ಶ್ರೀಸತ್ಯಲೋಕನಾಥ - ಶ್ರೀವಿಶ್ವನಾಥ - ಶ್ರೀಕಾಶೀನಾಥ - ಶ್ರೀಗಂಗಾನಾಥ - ಶ್ರೀಕಲ್ಯಾಣನಾಥ - ಶ್ರೀಶಂಕರನಾಥ - ಶ್ರೀಪ್ರೇಮನಾಥ - ಶ್ರೀಪಂಪಾನಾಥ - ಶ್ರೀವಿರೂಪಾಕ್ಷನಾಥ - ಶ್ರೀಹರಿನಾಥ - ಶ್ರೀರಾಮನಾಥ - ಶ್ರೀರಂಗನಾಥ - ಶ್ರೀಗುರೂಜಿನಾಥ - ಶ್ರೀಸಿದ್ಧನಾಥ - ಶ್ರೀಭಜನನಾಥ - ಶ್ರೀಶಾಂತಿನಾಥ - ಶ್ರೀಸೋಮನಾಥ - ಶ್ರೀಶಿವನಾಥ - ಶ್ರೀವಸಂತನಾಥ - ಶ್ರೀಮೇಹರನಾಥ - ಶ್ರೀ ಗಣೇಶನಾಥ- ಶ್ರೀಪಾರ್ಶ್ವನಾಥ - ಶ್ರೀಧರ್ಮನಾಥ - ಶ್ರೀಭೈರವನಾಥ - ಶ್ರೀನಾದಿನಾಥ - ಶ್ರೀಸಂಪಾನಾಥ - ಶ್ರೀಟೀಕರನಾಥ - ಶ್ರೀಗಂಗಾನಾಥ - ಶ್ರೀಧವರನಾಥ - ಶ್ರೀಶಿವಾನಾಥ - ಶ್ರೀಕುರುಕ್ಷೇತ್ರನಾಥ - ಶ್ರೀಬಸವನಾಥ - ಶ್ರೀಸಾಯರನಾಥ - ಶ್ರೀಪ್ರೇಮನಾಥ - ಶ್ರೀಧೀರಜನಾಥ -ಶ್ರೀಸುಂದರನಾಥ - ಶ್ರೀಅದಿತ್ಯನಾಥ - ಶ್ರೀತೇಜನಾಥ - ಶ್ರೀಭಕ್ತಾನಾಥ - ಶ್ರೀಚಂದ್ರಶೇಖರನಾಥ - ಶ್ರೀರಮಾನಂದನಾಥ ಹಾಗೂ ಶ್ರೀಬಾಲಗಂಗಾಧರನಾಥ** ಹೀಗೆ ೭೧ ನಾಥ ಮಹನೀಯರುಗಳು ಚುಂಚನಗಿರಿಯ ಸಿದ್ಧ

ಸಿಂಹಾಸನಕ್ಕೆ ಒಡೆಯರೆನಿಸಿಕೊಂಡಿದ್ದಾರೆ. ಇವರಲ್ಲಿ ಹಲವರು ಅತ್ಯುತ್ತಮ ಬೋಧಕರಾಗಿದ್ದು, ಜನ ಸಾಮಾನ್ಯರಿಗೆ ಸಾತ್ವಿಕ ದಾರಿ ತೋರಿಸುವ ಹಲವು ಮೃದು ಮಾತುಗಳನ್ನಾಡಿದ್ದಾರೆ. ಅವರುಗಳ ಬೋಧನೆಯನ್ನಾಧರಿಸಿ ಕವಿ ಹನುಮೇಗೌಡರು ಸುಲಲಿತ ಭಾಷಾ ಮಾಧುರ್ಯದಿಂದ ಪದ್ಯ ಕಟ್ಟಿ ರಂಜಿಸಿದ್ದಾರೆ.

**ಚಾಮರಸನ 'ಪ್ರಭುಲಿಂಗ ಲೀಲೆ'ಯಲ್ಲಿ ಗೋರಕ್ಷ ಪ್ರಸಂಗ:**

ನಾಥ ಪಂಥದ ಬಹು ಮುಖ್ಯ ಅನುಯಾಯಿಯೆನಿಸಿದ ಗೋರಕ್ಷನನ್ನು ಅಲ್ಲಮ ಪ್ರಭು ಭೇಟಿ ಮಾಡುವ ಪ್ರಸಂಗವನ್ನು ಚಾಮರಸನು **'ಪ್ರಭುಲಿಂಗ ಲೀಲೆ'**ಯಲ್ಲಿ ಉಲ್ಲೇಖಿಸಿದ್ದಾನೆ. ಅಲ್ಲಮ ಪ್ರಭು ತಾನು ಕಂಡು ಕೊಂಡ ದಾರ್ಶನಿಕ ವಿಚಾರ ತತ್ವಗಳನ್ನು ಜನ ಸಾಮಾನ್ಯರಿಗೆ ಮನದಟ್ಟು ಮಾಡಿಸಲು ಊರೂರು ಅಲೆಯುತ್ತಾ ಬೋಧನಾ ಕಾರ್ಯದಲ್ಲಿ ತೊಡಗುತ್ತಾನೆ. ಆಗ ನಾಥ ಪಂಥದ ಗೋರಕ್ಷನನ್ನು ಅಲ್ಲಮ ಭೇಟಿಯಾಗುವ ಸಂದರ್ಭ ಬರುತ್ತದೆ. ಗೋರಕ್ಷ, ಅಲ್ಲಮನನ್ನು ತಾತ್ಸಾರದಿಂದ ಕಂಡು, ಮತ್ಸರದಿಂದ ನೋಡುತ್ತಾನೆಂದು ಚಾಮರಸ ವರ್ಣಿಸುತ್ತಾನೆ. ಗೋರಕ್ಷ ಮತ್ತು ಅಲ್ಲಮರ ನಡುವೆ ದೇಹಕ್ಕೆ ಸಂಬಂಧಪಟ್ಟಂತೆ ನಾನಾ ರೀತಿಯ ಚರ್ಚೆಗಳಾಗುತ್ತವೆ. **'ಹಠಯೋಗ'**ವನ್ನು ತನ್ನ ಮೂಲ ತತ್ವವನ್ನಾಗಿ **'ನಾಥ ಪಂಥ'** ಆಚರಿಸುತ್ತಿದ್ದುದರಿಂದ ಗೋರಕ್ಷ, ದೇಹದ ಪರವಾಗಿ ಮಾತನಾಡುತ್ತಾನೆ. ಆದರೆ ಅಲ್ಲಮನಿಗೆ ದೇಹವೆನ್ನುವುದು ಕ್ಷಣಿಕ. ದೇಹವೇ ಪ್ರಧಾನ ಎನ್ನುವ ಮಾತನ್ನು ಆತ ಅಲ್ಲಗಳೆಯುತ್ತಾನೆ. ಇದರ ಸಮರ್ಥನೆಗಾಗಿ, "ಅಲ್ಲಮ ಕತ್ತಿಯಿಂದ ಗೋರಕ್ಷನನ್ನು ಹೊಡೆದಾಗ, ಆತನಿಗೆ ಯಾವ ಕೊಂಕೂ ಬಾಧಿಸದೆ, ಕೇವಲ **'ಖಣಿಲ್ ಖಣಿಲ್'** ಎಂಬ ಶಬ್ಧ ಬರುತ್ತದೆ. ಆದರೆ ಗೋರಕ್ಷ, ತನ್ನ ಕತ್ತಿಯಿಂದ ಅಲ್ಲಮನಿಗೆ ಹೊಡೆದಾಗ ಬರೀ ಬಯಲಿಗೆ ಹೊಡೆದಂತೆ ಕತ್ತಿ ಗಾಳಿಯಲಿ ತೇಲಾಡಿತೆಂದು" *೧೧ ಚಾಮರಸ ವರ್ಣಿಸುತ್ತಾನೆ.

**"ಹಿಡಿದು ಹಿಂಗದೆ ಬಲಿದು ಝಳಪಿಸಿ**
**ಜಡಿದು ಹೊಚಿ ಕೈಯಿಂದೆ ಖಣೆ ಖಟಿ**
**ಲಿಡಲಿಕಾ ಪ್ರಭುವಬ್ಬರಿಸಿ ಬಿಙ ಹೊಯಿಲನೆಙಗಿದರೆ**
**ನಡುಗಿದುದು ನೆಲ ಶಿಲೆಗಳನು ಮೈ**
**ಗೊಡಹಿದುದು ಗಿರಿಯೊಂದು ಕೂದಲು**
**ಕಡಿಯದಾ ಗೋರಕ್ಷನಲಿಯೇನೆಂಬೆನಚ್ಚರಿಯ"**

ಈ ನಿದರ್ಶನದಿಂದ ಅಲ್ಲಮ ತನ್ನ ನಿಲುವನ್ನು ಸಮರ್ಥಿಸಿ, ಗೋರಕ್ಷನನ್ನು ಆಶೀರ್ವದಿಸಿ ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ಅಲ್ಲಮನಿಗೆ ನಾಥ ಪಂಥದ ಧ್ಯೇಯ ಉದ್ದೇಶಗಳನ್ನು ಕುರಿತಂತೆ ಅಷ್ಟಾಗಿ ಗೌರವವಿರಲಿಲ್ಲವೇನೋ ಎನಿಸುತ್ತದೆ. ಒಂದು ಪಂಥ, ಮತ್ತೊಂದು ಪಂಥವನ್ನು ನಂಬದಿರುವುದು, ಟೀಕಿಸುವುದು ಸಹಜ. ಇಲ್ಲಿ ಅಲ್ಲಮನೇ ಕಥಾನಾಯಕನಾಗಿರುವುದರಿಂದ ಆತನ ಪರಿಧಿಗೆ ಬರುವಂಥವರೆಲ್ಲ ಮೊದಮೊದಲು ಅವನ

ವಿರುದ್ಧ ಸೆಟೆದು ನಿಂತು ನಂತರ ಶರಣಾಗುತ್ತಾರೆ. ಗೋರಕ್ಷನನ್ನು **'ಗರ್ವಿಷ್ಟ ಸನ್ಯಾಸಿ'**ಯಂತೆ ಚಾಮರಸ ವರ್ಣಿಸಿರುವುದು ಇದೇ ಕಾರಣಕ್ಕಾಗಿ ಎನಿಸುತ್ತದೆ. (ಹೆಚ್ಚಿನ ಓದಿಗೆ **"ವೀರಶೈವ ಪುರಾಣಗಳಲ್ಲಿ ಅಲ್ಲಮನ ಪಾತ್ರ ಕಲ್ಪನೆ" – ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ – ಡಾ.ಕೆ.ಎಲ್.ಗೋಪಾಲಕೃಷ್ಣಯ್ಯ** ಪುಟ:೩೮೩ ನೋಡಿ)

– ಒಟ್ಟಿನಲ್ಲಿ **'ನಾಥ ಪಂಥ'**, ವೈದಿಕ ಪಂಥಗಳಿಗೆ ಅಭಿಮುಖವಾಗಿ ಹುಟ್ಟಿಕೊಂಡ ಕ್ರಾಂತಿಕಾರಕ ಪಂಥವೆನಿಸಿದೆ. ಮೇಲ್ಜಾತಿಯ ಜನರಿಂದ ಅನುಭವಿಸಿದ ಅವಮಾನ, ಶೋಷಣೆಗಳಿಗೆ ಪ್ರತಿಕ್ರಿಯೆ ರೂಪದಲ್ಲಿ ಈ ಪಂಥ ನೆಲೆಗೊಂಡಿದೆ. ಈ ಪಂಥದ ಅನುಯಾಯಿಗಳು ಬಹುಪಾಲು ಕೃಷಿಕರು; ಕೆಳವರ್ಗದ ಜನರು ಮತ್ತು ಕೆಳ ಜಾತಿಯ ಜನರಾಗಿದ್ದರು. ವೈದಿಕ ಪಂಥದವರು ತಮ್ಮ ಸಿದ್ಧಾಂತ ಮಂಡನೆಗೆ **'ಸಂಸ್ಕೃತ'**ವನ್ನೇ ಹೆಚ್ಚಾಗಿ ಬಳಸಿಕೊಂಡರೆ, ನಾಥ ಪಂಥೀಯರು ಪ್ರಾದೇಶಿಕ ಭಾಷೆಗಳ ಮೂಲಕವೇ ತಮ್ಮ ಧ್ಯೇಯ–ಧೋರಣೆಗಳನ್ನು ಸಮರ್ಥವಾಗಿ ದಾಖಲಿಸಿದ್ದಾರೆ.

## ***ಟಿಪ್ಪಣಿಗಳು***

೦೧. ಡಾ.ಕೆ.ರಾಜೇಶ್ವರಿಗೌಡ: **"ಆದಿಚುಂಚನಗಿರಿ: ಒಂದು ಸಾಂಸ್ಕೃತಿಕ ಅಧ್ಯಯನ"**; ಪುಟ:೧೨೬

೦೨. ಅದೇ: ಪುಟ:೧೨೯

೦೩. ಅದೇ: ಪುಟ:೧೩೩

೦೪. ಸಂ.ಹೆಚ್.ಕೆ ಸಿದ್ಧಗಂಗಯ್ಯ: **"ವಿಶ್ವ ಸಂತರು"**; ಮ.ಸು.ಕೃಷ್ಣಮೂರ್ತಿಯವರ ಲೇಖನ, ಪುಟ:೨೬೩

೦೫. ಮೂಲ: ಡಾ.ರಾಮಚಂದ್ರ ಚಿಂತಾಮಣ ಢೇರೆ; ಅನು: ಚಂದ್ರಕಾಂತ ಪೋಕಳೆ: **"ನಾಥ ಸಂಪ್ರದಾಯದ ಇತಿಹಾಸ"**; ಪುಟ: ೦೯

೦೬. ಡಾ.ಕೆ. ರಹಮತ್ ತರೀಕೆರೆ: **"ಕರ್ನಾಟಕದ ನಾಥಪಂಥ"**: ಪುಟ:೧೨೫

೦೭. ಡಾ.ರಾಮಚಂದ್ರ ಚಿಂತಾಮಣ ಢೇರೆ; ಅನು: ಚಂದ್ರಕಾಂತ ಪೋಕಳೆ: **"ನಾಥ ಸಂಪ್ರದಾಯದ ಇತಿಹಾಸ"**; ಪುಟ: ೩೫

೦೮. ಡಾ.ಕೆ.ರಾಜೇಶ್ವರಿಗೌಡ: **"ಆದಿಚುಂಚನಗಿರಿ: ಒಂದು ಸಾಂಸ್ಕೃತಿಕ ಅಧ್ಯಯನ"**; ಪುಟ:೧೦೮

೦೯. ಕೃಷ್ಣಾಜಿ ಶ್ರೀಪಾದರಾವ್ ಕುಲಕರ್ಣಿ: **"ಶ್ರೀನವನಾಥ ಭಕ್ತಿಸಾರ"**; ಪುಟ:೯೨

೧೦. ಡಾ.ಕೆ.ರಾಜೇಶ್ವರಿಗೌಡ: **"ಆದಿಚುಂಚನಗಿರಿ: ಒಂದು ಸಾಂಸ್ಕೃತಿಕ ಅಧ್ಯಯನ"**; ಪುಟ:೧೩೫

೧೧. ಡಾ.ಎಸ್. ವಿದ್ಯಾಶಂಕರ್ : **"ಚಾಮರಸನ ಪ್ರಭುಲಿಂಗಲೀಲೆ ಗದ್ಯಾನುವಾದ"**; ಪುಟ:೨೬೫

# ಹರಿ-ಅಜರ ಹೋರಾಟ

**"ಚುಂಚಾದ್ರಿ ಚಂದ್ರಿಕೆ"** ಮಹಾಕಾವ್ಯ ಬ್ರಹ್ಮ-ವಿಷ್ಣುಗಳ ಸ್ವರ್ಗಲೋಕದ ಒಡೆತನ ಕುರಿತಾದ ಹೋರಾಟದಿಂದ ಆರಂಭವಾಗುತ್ತದೆ. ಹೆಚ್ಚೂ ಕಡಿಮೆ ಒಂದೇ ಶಕ್ತಿಯುಳ್ಳ ಈ ಇಬ್ಬರು ದೇವತೆಗಳು ಸ್ವರ್ಗಲೋಕದ ಅಧಿಪತ್ಯಕ್ಕೆ ನಾನು ತಾನೆಂದು ಕಿತ್ತಾಡುವುದು ಮೋಜೆನಿಸುತ್ತದೆ. ಜಗಳ ತಾರಕಕ್ಕೆ ಹೋದಾಗ, ಶಿವ ಬಂದು ಇಬ್ಬರನ್ನೂ ಹಿಡಿತದಲ್ಲಿಟ್ಟುಕೊಂಡು ಜಗಳ ಪರಿಹರಿಸುತ್ತಾನೆ. ಈ ಸನ್ನಿವೇಶವನ್ನು ಹನುಮೇಗೌಡರು ಬಹು ಸೊಗಸಾಗಿ ವರ್ಣಿಸಿದ್ದಾರೆ.

ದೇವಲೋಕದ ನಾಯಕತ್ವ ಯಾರಿಗೆ ದಕ್ಕಬೇಕೆಂದು ಸ್ವರ್ಗದ ದೇವತೆಗಳೆಲ್ಲ ಕುಳಿತು ಚರ್ಚಿಸುತ್ತಾರೆ. **'ಬಹುಮುಖೀ ಬ್ರಹ್ಮನೇ, ವಿಶ್ವಧರ ವಿಷ್ಣುವೇ, ಶುಭ ಜನಕ ಶಂಭುವೇ?'** ಎಂದು ಅವರವರಲ್ಲೇ ಚರ್ಚೆ ಮಾಡುತ್ತಿರುತ್ತಾರೆ. ಬ್ರಹ್ಮ, ಸ್ವರ್ಗಲೋಕದ ಪಟ್ಟ ನನಗೇ ಆಗಬೇಕೆಂದು ಹೂಂಕರಿಸುತ್ತಾನೆ:

> **"ದಿವಿಜರನು ದನುಜರನು ಜನರುಗಳ ಜಂತುಗಳ**
> **ನಿರ್ಮಿಸಿಹ ನಾನೆ ಈ ಜಗದೊಡೆಯನು**
> **ಭವಿತವ್ಯ ಬರೆದಿಹೆನು ಜೀವಿಗಳ ಜನನದಲಿ**
> **ಲೋಕಗಳ ಲಾಲಿಸುವ ನಾಥ ನಾನು"**

**"ಮತಿ ಕೊಡುವ ಮಾತೆ"** ಎಂದೇ ಕರೆಯಲ್ಪಡುವ ಸರಸ್ವತಿ ನನಗೆ ಸತಿ, ಜ್ಞಾನ ಜ್ಯೋತಿಯನ್ನು ಬೀರುವಂಥವಳು; ನಾರದ ನನಗೆ ಮಗ. ದೇವತೆಗಳು ಮತ್ತು ರಾಕ್ಷಸರುಗಳ ತಪಸ್ಸಿಗೆ ಮೆಚ್ಚಿ ಶಕ್ತಿಯುತವಾದ ಶಸ್ತ್ರಗಳನ್ನು ಕೊಡುಗೆಯಾಗಿ ನೀಡುತ್ತಿರುವೆ. ಭಕ್ತಿಯಿಂದ ಭಜಿಸುವ ಮುನಿ-ಮನುಜರನ್ನು ಸಂತೋಷದಿಂದ ಹ್ಹರೈಸುತ್ತೇನೆ. ಸತಿ ಸರಸ್ವತಿ, ನನ್ನಿಂದಾಗಿ ವಾಗ್ದೇವಿ ಎಂದು ಹೆಸರು ಪಡೆದು ಸಂಗೀತ – ಸಾಹಿತ್ಯ – ಸಂಸ್ಕೃತಿ – ಕಲೆಗಳ ರೂಪದಲ್ಲಿ ಜನ ಮಾನಸದಲ್ಲಿ ವಿಹರಿಸುತ್ತಿದ್ದಾಳೆ – ಇಷ್ಟೆಲ್ಲ ಅರ್ಹತೆ – ಶಕ್ತಿ ಪಡೆದ ನಾನು, ಸ್ವರ್ಗ ಲೋಕದ ಅಧಿಪತಿ ಆಗಬಾರದೇಕೆ? ಎಂದು ಕೇಳುತ್ತ ಬ್ರಹ್ಮ.

> **"ಅಜ ನಾನು ಆದಿಯಿಂ ಅಮರರನು ಅಸುರರನು**
> **ಜನ ಜೀವಿ ಜಂತುಗಳ ಸೃಜಿಸುತಿಹೆನು**
> **ಅಜನೆ ನಿಜ, ಅಜನೆ ಜಗ, ಅಜ ಹೊರತು ಆರಿಹರು**
> **ಲೋಕಗಳ ಲಾಲಿಸಲು ಎಂದನವನು"**

ಬ್ರಹ್ಮ ಸ್ವರ್ಗ ಲೋಕದ ಅಧಿಪತಿಯೆಂದು ತನಗೆ ತಾನೇ ಘೋಷಿಸಿಕೊಂಡದ್ದನ್ನು ಉಳಿದ ದೇವತೆಗಳು ವಿಷ್ಣುವಿಗೆ ತಿಳಿಸುತ್ತಾರೆ. ವಿಷ್ಣು, ತಾನು ಬ್ರಹ್ಮನಿಗೇನು ಕಡಿಮೆ? ಸ್ವರ್ಗ ಲೋಕದ ಅಧಿಪತಿ ತಾನು ಏಕಾಗಬಾರದು? ಎಂದು ಭಾವಿಸಿ,

**"ಪ್ರಮತ್ತ ಪ್ರಜಾಪತಿ ನೀನೆನ್ನ ನಾಭಿಯಿಂ**
**ಜನಿಸಿರುವೆ, ಜಗಕೆ ನೀ ಒಡೆಯನಲ್ಲ**
**ಬೊಮ್ಮರಾ ಬ್ರಹ್ಮಾಂಡ ಬಹಳಿಹವು ಬಾನಿನಲಿ**
**ಪವಡಿಸಿವೆ ಪರಲೋಕ ನನ್ನಲೆಲ್ಲ"**

–ಎಂದು ಪ್ರತುತ್ತರ ನೀಡುತ್ತಾನೆ. ವೇದಗಳನ್ನು ಕದ್ದ ಮಧು ಕೈಟಭನೆನ್ನುವ ರಕ್ಕಸನನ್ನೂ, ಬರ್ಬರರನ್ನೂ ಮರ್ದಿಸಿದ್ದೇನೆ; ನಾನು ಮರ್ಮವನ್ನರಿತವ: ಮಂತ್ರಜ್ಞಾನ ತಿಳುವಳಿಕೆಯುಳ್ಳವ. ಮೀನಿನ ಅವತಾರ ತಾಳಿದ ನಾನು, ವೇದ ಮಂತ್ರಗಳನ್ನು ರಕ್ಷಿಸಿರುವಂಥವನು. ಸುವಿಶಾಲ ಪರ್ವತವೆನಿಸಿದ ಮಂದರ ಪರ್ವತವು ಸಾಗರದಲ್ಲಿ ಮುಳುಗಿ ಹೋಗಿದ್ದಾಗ, ದೇವತೆಗಳ ಬೇಡಿಕೆಯನ್ನು ಮನ್ನಿಸಿ, ಕೂರ್ಮಾವತಾರ ತಾಳಿ ಪರ್ವತವನ್ನು ರಕ್ಷಿಸಿದೆ. ದೇವರು, ರಾಕ್ಷಸರು ಮಂದರ ಪರ್ವತದ ಮೂಲಕ ಸಾಗರವನ್ನು ಕಡೆದಾಗ ಅಮೃತ ಉಕ್ಕಿ ಬಂತು. ಅದು ದೇವತೆಗಳಿಗೆ ದಕ್ಕಿ, ಅವರು ಅಮರತ್ವ ಸಾಧಿಸಲು ನಾನು ಕಾರಣನಾಗಿದ್ದೆ. ಹಿರಣ್ಯಾಕ್ಷ, ಭೂದೇವಿಯನ್ನು ಸಾಗರ ತಳದಲ್ಲಿ ಅಡಗಿಸಿದಾಗ, "ನರರುಗಳ ನಿರ್ಮಿಸಲು ಭೂದೇವಿ ಬೇಕೆಂದು ಬ್ರಹ್ಮ ನೀನು ನನ್ನನ್ನು ಅಂಗಲಾಚಿದೆ. ಆಗ **'ವರಹಾವತಾರ'** ತಾಳಿ ನಾನು ರಾಕ್ಷಸನನ್ನು ಕೊಂದು, ಭೂದೇವಿ ರಕ್ಷಿಸಿದೆ. ನರಸಿಂಹ ಅವತಾರ ತಾಳಿ **"ರಕ್ಕಸನ ರುಧಿರವನು ಬಗಿದು ಕುಡಿದೆ"**;

**"ನಭದಲ್ಲಿ ನಾನೊಮ್ಮೆ ಅಡಿಯಿಂದ ಆವರಿಸಿ**
**ಇಳೆಯಲ್ಲಿ ಇಟ್ಟದ್ದೆನೊಂದು ಪಾದ**
**ನಭದಲ್ಲಿ ನೀ ನನ್ನ ಪಾದದಲಿ ಪವಡಿಸಿರೆ**
**ಎಲ್ಲಿತ್ತೊ ಎಲೆ ಅಜನೆ ನಿನ್ನ ವಾದ"**

–ಎಂದು ಬ್ರಹ್ಮನನ್ನು ಧಿಕ್ಕರಿಸಿ ನುಡಿಯುತ್ತಾನೆ. ವಿಷ್ಣುವಿನ ಮಾತು ಕೇಳಿ ಸಿಟ್ಟಾದ ಬ್ರಹ್ಮ, ವಿಷ್ಣುವನ್ನು ನೇರವಾಗಿ ಯುದ್ಧಕ್ಕೆ ಆಹ್ವಾನಿಸುತ್ತಾನೆ. ಬ್ರಹ್ಮ, ಅಗ್ನಿ ಬಾಣವನ್ನು ಬಿಟ್ಟಿದ್ದರಿಂದ ಜ್ವಾಲೆ ಭುಗುಭುಗನೆ ಕಾರುತ್ತ ವಾತಾವರಣ ಭೀಕರವಾಗುತ್ತದೆ. ವಿಷ್ಣು ಪ್ರತಿಯಾಗಿ ವರುಣಾಸ್ತ್ರ ಪ್ರಯೋಗಿಸಿದಾಗ, ಅಜನ ಶರ ಕಳೆಗುಂದಿ ಕಿಡಿ ಆರಿ ಕಳೆಗುಂದಿತು. ಕೋಪೋದ್ರಿಕ್ತನಾದ ಬ್ರಹ್ಮ, ಸರ್ಪಾಸ್ತ್ರ ಬಿಟ್ಟು **"ವಿಷ್ಣುವನು ವಿಷದಿಂದ ರಕ್ಷಿಸುವ ರಕ್ಷಕರು ಜಗದಲ್ಲಿ ಜನಿಸಿಲ್ಲ"**ವೆಂದು ಹೇಳಿದ. ಪ್ರತಿಯಾಗಿ ವಿಷ್ಣು, ಹರಿತವಾದ ಗರುಡಾಸ್ತ್ರ ಬಿಟ್ಟಾಗ, **'ಸರ್ಪಾಸ್ತ್ರ'**, ಸಮರದಿಂದಲೇ ಓಡಿ ಹೋಯಿತೆಂದು ಕವಿ ಬಣ್ಣಿಸುತ್ತಾರೆ.

ಹೆಜ್ಜೆ ಹೆಜ್ಜೆಗೂ ಕುಪಿತನಾದ ಬ್ರಹ್ಮ, ತನ್ನ ತೀಕ್ಷ್ಣ ಬಾಣವಾದ **'ಬ್ರಹ್ಮಾಸ್ತ್ರ'**ವನ್ನೇ ಪ್ರಯೋಗಿಸುತ್ತಾನೆ. ವಿಷ್ಣು ಕೂಡ ತನಗೇ ವಿಶಿಷ್ಟವೆನಿಸಿದ **'ವಿಷ್ಣು ಚಕ್ರ'**ವನ್ನು ಪ್ರತಿಯಾಗಿ ಪ್ರಯೋಗ ಮಾಡುತ್ತಾನೆ. ಎರಡೂ ಅಸ್ತ್ರಗಳು ಬಾನಿನಲ್ಲಿ ಬೆಂಕಿಯುಗುಳಿ ಸಾಕಷ್ಟು ಹಾನಿ ಉಂಟು ಮಾಡುತಿವೆ. ಸಾಗರದ ನೀರು ಕಾದು ಭೂಮಿ ಇದ್ದಲ್ಲೆಲ್ಲ ಹರಿಯುತ್ತಿರಲು, ಸುರರುಗಳು ಈಶ್ವರನನ್ನು ಭೇಟಿ

ಮಾಡಿ **"ಶಂಕರನೆ! ಶುಭಕರನೆ! ಕರುಣಾಳು ಕಾಪಾಡು ಸರ್ವರನು ಸುಡುತಿಹರು ಹರಿ ಬೊಮ್ಮರು"** ಎಂದು ನಿವೇದಿಸಿಕೊಳ್ಳುತ್ತಾರೆ.

**"ಸೋತವರ ಸೇಡಿನಾ ದ್ವೇಷಯುತ ದಾವಾಗ್ನಿ**
**ಗೆದ್ದವರ ಗೆಲುವುದಕೆ ತವಕಿಸುವುದು**
**ಮತ್ಸರವು ಮನದಲ್ಲಿ ನಿರಂತರ ನರ್ತಿಸುತ**
**ವಿಜಯಿಗಳ ವಿನಾಶಕೆ ಹವಣಿಸುವುದು"**

–ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ. ಹಿಂದೆ ಇದೇ ರೀತಿಯ ಅನೇಕ ಸಂಕಷ್ಟಮಯ ಪ್ರಸಂಗಗಳು ಎದುರಾದಾಗ ಶಿವ ಬಂದು ತಮ್ಮನ್ನು ರಕ್ಷಿಸಿದ ವಿಚಾರವನ್ನು ನೆನಪಿಸುತ್ತಾರೆ.

**'ಬಾಳದಲಿ ಬಡಬಾಗ್ನಿ ಭುಜಗಳಲಿ ಭುಜಗಗಳು**
**ಜಟೆಯಲ್ಲಿ ಜಾಹ್ನವಿಯು ಭೂತನಾಥ**
**ಕಾಳವಿಷ ಕೊರಳಲ್ಲಿ ಕಟಿಯಲ್ಲಿ ಕರಿಯ ಜಿನ**
**ಶಿಖೆಯಲ್ಲಿ ಸೌಮ್ಯ ಶಶಿ ವಿಶ್ವನಾಥ'**

– ಈ ತೆರನಾದ ರೂಪ ಪಡೆದ ಈಶ್ವರನು **"ಹರಿ ಬೊಮ್ಮ ಹಗೆತನದ ಭಯವರಿತು"** ಆದಿಶಕ್ತಿಯನ್ನು ಪ್ರಾರ್ಥಿಸುತ್ತಾನೆ:

**"ವ್ಯೋಮದಲಿ ವಹ್ನಿಯನು ಹರಿಸಿರಲು ಹರಿ ಚಕ್ರ**
**ಬ್ರಹ್ಮಾಸ್ತ್ರ, ಬೆದರಿಹವು ಲೋಕವೆಲ್ಲ**
**ಹೇ ಮಾತೆ ಹೇ ಶಕ್ತಿ ಹರಸಮ್ಮ ಹರನಿವನ**
**ಅಡಗಿಸಲು ಅಧೋಕ್ಷಜ ಅಜರ ಸೊಲ್ಲ"**

ಆದಿಶಕ್ತಿ, ಶಿವನ ತಪಸ್ಸಿಗೆ ಮೆಚ್ಚಿ ದಿವ್ಯಾಸ್ತ್ರ ನೀಡಿ ಹಾರೈಸುತ್ತಾಳೆ. ಶಿವ ತನ್ನ ಹಣೆಗಣ್ಣು ಬಿಟ್ಟು ಭೀಕರ ರೂಪ ಪಡೆದುಕೊಳ್ಳುತ್ತಾನೆ. ಅವನ ರೂಪ ಕಂಡೇ ಸುರರುಗಳು ಹೆದರಿಕೊಳ್ಳುತ್ತಾರೆ. ಶಿವನು ಬಿಟ್ಟ ದಿವ್ಯಾಸ್ತ್ರಕ್ಕೆ, ಬ್ರಹ್ಮನ ಬ್ರಹ್ಮಾಸ್ತ್ರ ಮತ್ತು ವಿಷ್ಣುವಿನ ಶ್ರೀ ಚಕ್ರ ಸೊರಗುತ್ತ ಬಳಲುತ್ತ ಮಣಿಯುತ್ತವೆ. ಇದನ್ನು ಕಂಡ ವಿಷ್ಣು **"ಸುರಶ್ರೇಷ್ಠ ನಿನ್ನಯಾ ನಿಜ ಸತ್ಯ ನೋಡಿದೆನು, ಮನ್ನಿಸೈ ಮೃಡ ನನ್ನ ಅಪರಾಧವ"** ಎಂದು ಈಶನಿಗೆ ಶರಣಾಗುತ್ತಾನೆ. ಆದರೆ ಬ್ರಹ್ಮ, ಸುಲಭದಲ್ಲಿ ಸೋಲೊಪ್ಪಿಕೊಳ್ಳದೆ ಸೆಟೆದು ನಿಲ್ಲುತ್ತಾನೆ. ಆಗ ಶಿವನು **"ಹೇ ಬೊಮ್ಮ! ಹೇ ಗರ್ವಿ! ಸೌಮ್ಯತ್ವ ಸೌಹಾರ್ದ ಸೌಜನ್ಯ ಸಧ್ಭಾವ ನಿನ್ನಲಿಲ್ಲ; ನಮ್ರತೆಯ ನೀತಿ ನೀ ಕಲಿಯಲಿಲ್ಲ"** ಎಂದು ಬ್ರಹ್ಮನನ್ನು ಪ್ರಶ್ನಿಸುತ್ತಾನೆ. ಅದಕ್ಕೆ ಉತ್ತರವಾಗಿ ಬ್ರಹ್ಮ,

**"ಪಶುಪತಿಯೆ ! ಪ್ರಜಾಪತಿ ನೀತಿಯೆಂದು ನಿನಗೇಕೆ**
**ಸುಡುಗಾಡೆ ಸಗ್ಗವೈ ಪ್ರೇತನಾಥ**
**ಸ್ಮಶಾನದಿ ಶವಗಳನು ಕಾಯುತಿಹ ಕಾಯಕದ**
**ನೀತಿಯದು ನಿನ್ನದೈ ಭೂತನಾಥ"**

–ಎಂದು ಹಂಗಿಸಿ ಬಿಡುತ್ತಾನೆ. ಕೋಪಿಸಿಕೊಂಡ ಶಿವ ತನ್ನ ಉಗುರಿನಿಂದಲೇ ಬ್ರಹ್ಮನ ತಲೆಯೊಂದನ್ನು ಎಳೆದಾಗ, ತಲೆ ಕತ್ತರಿಸಿ ಶಿವನ ಕೈಗಂಟಿಕೊಳ್ಳುತ್ತದೆ. ತಲೆ ಕಳೆದುಕೊಂಡ ಬ್ರಹ್ಮ, **"ಸೋಮಧರ ಶಿವ ನಿನ್ನ ನಿರ್ಭಯದಿ ನಿಂದಿಸಿದೆ, ಕರುಣಾಳು ಕರುಣೆಯಿಂ ಕ್ಷಮಿಸೆನ್ನನು"** ಎಂದು ಶಿವನನ್ನು ಬೇಡಿಕೊಳ್ಳುತ್ತಾನೆ. ಈಶ್ವರನು ತನ್ನ ಕೈಗಂಟಿಕೊಂಡ ಬ್ರಹ್ಮನ ತಲೆಯನ್ನು ಕಿತ್ತೊಗೆದರೂ ಕೈಯಿಂದ ಜಾರುತ್ತಿಲ್ಲ. ಶೂಲದಿಂದ ಕಿತ್ತಷ್ಟೂ ತಲೆ, ಶಿವನ ಕೈ ಕಚ್ಚಿಕೊಳ್ಳುತ್ತದೆ. ಪಾರ್ವತಿ ತನ್ನ ಪತಿಗಾದ ಅವಸ್ಥೆಯನ್ನು ಕಂಡು ಆದಿಶಕ್ತಿಯನ್ನು ಪ್ರಾರ್ಥಿಸುತ್ತಾಳೆ. ಆದಿಶಕ್ತಿ, ಕರ್ಮ ಯಾರನ್ನೂ ಬಿಡದು, ಈಶನನ್ನೂ. ಹಾಗಾಗಿ ಆತ ಕಾಶಿಗೆ ಹೋಗಿ ಭಿಕ್ಷೆ ಬೇಡಿದರೆ ಅನ್ನಪೂರ್ಣೆಯಿಂದ ಭಿಕ್ಷಾನ್ನ ಪಡೆದಾಗ ಬ್ರಹ್ಮನ ತಲೆ ಕಳಚಿ ಬೀಳುತ್ತದೆಂದು ಸಲಹೆ ನೀಡುತ್ತಾಳೆ. ಅದರಂತೆ ಈಶ್ವರ ಕಾಶಿಯಲ್ಲಿ ಭಿಕ್ಷೆ ಬೇಡಿ ಅನ್ನಪೂರ್ಣೆಯಿಂದ ಭಿಕ್ಷೆ ಪಡೆದಾಗ, ಬ್ರಹ್ಮನ ತಲೆ ಕಳಚಿ ಬೀಳುತ್ತದೆ. ಶಾಪ ವಿಮುಕ್ತನಾದ ಶಿವ ಕೈಲಾಸಕ್ಕೆ ಮರಳಿದಾಗ, ಇಡೀ ಸುರ ಲೋಕವೇ ನೆರೆದು ಈಶ್ವರನನ್ನು ಭಕ್ತಿಯಿಂದ ಕೊಂಡಾಡಿ ಪಾದ ಪೂಜಿಸುತ್ತದೆ. ಇದನ್ನು ಕಂಡ ಬ್ರಹ್ಮ, ಮತ್ತೆ ವಿಷ್ಣು, ಶಿವರನ್ನು ನಿಂದಿಸಿ ಗಲಾಟೆ ಮಾಡುತ್ತಾನೆ. ಶಿವ ಕೋಪೋದ್ರಿಕ್ತನಾಗಿ, ತನ್ನಂಶದಿಂದಲೇ ಭೈರವನನ್ನು ಸೃಷ್ಟಿಸುತ್ತಾನೆ.

**"ಭೈರವನು ಬೆಂಕಿಯನು ಕಾರುತ್ತ ಕಣ್ಗಳಿಂ**
**ಅರಿತರಿವ ಅಸಿಯನ್ನು ಝಳಪಿಸಿದನು**
**ನರ್ತಿಸುತ ನಾಭಿ ಜನ ಪಳಂಚಿಸಿ ಪಿಡಿದೆಳೆದು**
**ಅಸಿಯಿಂದ ಅಪ್ಪಳಿಸಿ ಕೆಳಬಿದ್ದನು"**

ಸುರರುಗಳೆಲ್ಲ ಈಶನನ್ನು ಕ್ಷಮಿಸಿ ಬ್ರಹ್ಮನನ್ನು ಬದುಕಿಸಲು ಭಿನ್ನವಿಸಿಕೊಳ್ಳುತ್ತಾರೆ. ಬ್ರಹ್ಮ ಮೂರ್ಛೆಯಿಂದೆದ್ದವನಂತೆ ಜೀವ ಪಡೆದು ಈಶನಿಗೆರಗುತ್ತಾನೆ.

ಸ್ವರ್ಗ ಲೋಕದ ಅಧಿಪತ್ಯಕ್ಕಾಗಿ ಕಿತ್ತಾಡುವ ಬ್ರಹ್ಮ, ವಿಷ್ಣುಗಳು ಸಾಮಾನ್ಯ ಮನುಷ್ಯರಿಗಿಂತ ಕಡೆಯಾಗಿ ವರ್ತಿಸಿದ್ದಾರೆ. ಐಹಿಕ ಸುಖ ಲೋಲುಪ್ತತೆಗಳಿಂದ ದೂರವಿರಬೇಕಾದ ಸ್ವರ್ಗಲೋಕದ ಜನರೇ, ಅಧಿಕಾರಕ್ಕಾಗಿ ಇಷ್ಟು ತೀವ್ರವಾಗಿ ಪೈಪೋಟಿ ನಡೆಸಿದರೆ, ಇನ್ನು ಸಾಮಾನ್ಯ ಜನರ ಗತಿಯೇನು? ಎನಿಸಿಬಿಡುತ್ತದೆ. ನಾನೇ ದೊಡ್ಡವನೆನ್ನುವ ಬ್ರಹ್ಮನ ಅಹಂಕಾರ, ರಾಕ್ಷಸರ ಅಹಂಕಾರಕ್ಕಿಂತಲೂ ಮಿಗಿಲೆನಿಸುತ್ತದೆ. ಕೋಪಕ್ಕೆ ವಶನಾದ ಈಶ್ವರ ಕೂಡ ಬ್ರಹ್ಮ ಹತ್ಯೆ ದೋಷಕ್ಕೆ ಸಿಲುಕಿಕೊಳ್ಳುತ್ತಾನೆ. ದೇವತೆಗಳು ಹೇಗೆ ಕೋಪವನ್ನು ಅದುಮಿಡದೆ ತಪ್ಪು ಮಾಡಿಕೊಳ್ಳುತ್ತಾರೆ ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ. ದೇವಲೋಕದಲ್ಲಿ ಈಶ್ವರ ಬ್ರಹ್ಮನ ತಲೆ ತರಿದದ್ದಕ್ಕೆ, ಭೂಲೋಕದ ಕಾಶಿಯಲ್ಲಿ ಭಿಕ್ಷೆ ಬೇಡಬೇಕಾಗುತ್ತದೆ. ಸ್ವರ್ಗಲೋಕದ ಸಮಸ್ಯೆಗೆ, ಮರ್ತ್ಯ ಲೋಕ ಪರಿಹಾರ ನೀಡುತ್ತದೆ. ಶಿವ ತನ್ನ ಕೈಗಂಟಿದ ಬ್ರಹ್ಮನ ತಲೆಯನ್ನು ಕಳಚಿಕೊಳ್ಳುತ್ತಾನೆ. ಹರಿಹರ ಬ್ರಹ್ಮಾದಿಗಳು ಕೂಡ ಕರ್ಮ ಫಲವನ್ನು ಅನುಭವಿಸಿ ತೀರಿಸಬೇಕು. ಒಟ್ಟಿನಲ್ಲಿ ಮನುಷ್ಯನಲ್ಲಿರುವ ಎಲ್ಲ ಭಾವಾವೇಗಗಳು ದೇವತೆಗಳಲ್ಲೂ ಇರುವುದರಿಂದ, 'ಮನುಷ್ಯನನ್ನು ಮೀರಲಾರದ ದೇವರು'

ಅನ್ನಿಸಿಬಿಡುತ್ತದೆ. ಆದರೆ ಕವಿ ಹನುಮೇಗೌಡರು ಆಸ್ತಿಕ ಮನೋಭಾವದಿಂದಲೇ ಕಾವ್ಯ ರಚಿಸಿರುವುದರಿಂದ ಎಲ್ಲಿಯೂ ಇಂಥ ಪ್ರಶ್ನೆಗಳನ್ನು ಕೇಳಿಕೊಳ್ಳುವುದಿಲ್ಲ. ಪೌರಾಣಿಕ ಕಥೆಯ ಸನ್ನಿವೇಶವನ್ನು ವರ್ಣಿಸುವಾಗ ಹೀಗೆ ಪ್ರಶ್ನೆ ಕೇಳಿಕೊಳ್ಳಬೇಕಾದ ಅಗತ್ಯವೂ ಇರದು! ಏಕೆಂದರೆ ಪುರಾಣಗಳ ಅಧ್ಯಯನದಲ್ಲಿ ಸರಿ-ತಪ್ಪುಗಳನ್ನು ವಿಂಗಡಿಸುವುದು ಇಂದಿಗೂ ಚರ್ಚಾಸ್ಪದವಾಗಿಯೇ ಇದೆ. ಹಾಗೆಯೇ ಮತ-ಧಾರ್ಮಿಕ ಶ್ರದ್ಧೆಯಲ್ಲಿ ಇವೆಲ್ಲ ಹೇಗೋ ಹೊಂದಿಕೆಯಾಗಿ ಬಿಡುತ್ತವೆ!

# ಚುಂಚ–ಕಂಚರ ದಮನ

ಚುಂಚ ಮತ್ತು ಕಂಚ ಎನ್ನುವ ರಕ್ಕಸ ಸಹೋದರರನ್ನು ಈಶ್ವರ, ದಮನ ಮಾಡುವ ಪ್ರಸಂಗವೊಂದು **'ಚುಂಚಾದ್ರಿ ಚಂದ್ರಿಕೆ'**ಯಲ್ಲಿ ಕಾಣಿಸಿಕೊಳ್ಳುತ್ತದೆ. ರಕ್ಕಸರ ನಿಯಮ ಮೀರಿದ ನಡವಳಿಕೆಯಿಂದ ಬೇಸತ್ತ ಜನತೆ ಈಶ್ವರನ ಮೊರೆಹೊಕ್ಕಾಗ, ಕೋಪೋದ್ರಿಕ್ತನಾದ ಶಿವ ಅವರುಗಳನ್ನು ಸದೆ ಬಡಿದು ಜನರ ಕಣ್ಣೀರೊರೆಸುವ ಈ ಪ್ರಸಂಗ ಸಂಚಿಕೆ-೪ರಲ್ಲಿ ಚಿತ್ರಣಗೊಂಡಿದೆ. ಹನುಮೇಗೌಡರ ಭಾಷಾಪ್ರೌಢಿಮೆ, ರಕ್ಕಸರ ದೌರ್ಜನ್ಯ ಪ್ರಕರಣಗಳನ್ನು ವರ್ಣಿಸುವ ಸಂದರ್ಭಗಳಲ್ಲಿ ವ್ಯಕ್ತಗೊಂಡಿದೆ. ದೈವ ಮತ್ತು ರಕ್ಕಸರ ನಡುವಿನ ಯುದ್ಧ, ಅನೇಕ ಸಾಮಾಜಿಕ ರಚನೆಯ ಒಳ ವಿವರಗಳನ್ನು ಕೊಡುವುದರಿಂದ ಈ ಸನ್ನಿವೇಶ ವಿಶೇಷವೆನಿಸುತ್ತದೆ.

ಚುಂಚಾದ್ರಿಯ ಸಮೀಪದಲ್ಲಿಯೇ ವಾಸವಾಗಿದ್ದವರು ಚುಂಚ ಮತ್ತು ಕಂಚ ಎನ್ನುವ ರಾಕ್ಷಸರು. ದುಷ್ಟ ದಾನವರೆಂದು ಹೆಸರಾಗಿದ್ದ ಅವರು, ಧನ ಕನಕ ಧಾನ್ಯ ದೋಚುತ್ತಿದ್ದರು; ಸಾಧ್ವಿಯರ ಶೀಲವನ್ನೇ ಅಪಹರಿಸುತ್ತಿದ್ದರು.

**"ದನುಕುಲಜ ದುರ್ಜನರು ಸೆರೆ ಕುಡಿದು ಸವಿದರೈ**
**ಮಹಿಳೆಯರ ಮೈಸಿರಿಯ ಮದೋತ್ಸವದಿ**
**ಧನ, ಕನಕ, ಧುರಂಧರಿಗಳ ದೋಚಿ ಗುಡುಗಿದರು**
**ಬೀಗುತ್ತ ಬಂಡುಂಡ ದುಂಬಿ ತೆರದಿ"**

–ಹೀಗಿರುವಾಗ ಸುಗುಣ ಮಣಿ ಸಾಧ್ವಿಯರು ಕೆನ್ನೀರ ಕಡಲಲ್ಲಿ ಮಜ್ಜನವನ್ನು ಮಾಡುವಂತಾಯಿತು; ಇಡೀ ಊರೇ ಅನಾಥವಾದಂತಾಗಿ ಗೋಳಿನ ಗೂಡಾಯಿತು; ಅಸುರರನ್ನು ದಂಡಿಸಲು ಯಾರೊಬ್ಬರೂ ಇರದಿದ್ದುದರಿಂದ, ಅವರ ಉಪಟಳ ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಯಿತು. ಅನಾಥ ಅಬಲೆಯರು ರಕ್ಷಣೆಗಾಗಿ ಜನರನ್ನು ಕೂಗಿಕೊಂಡರೆ, ಜನರು ಭಯದಿಂದ ದೂರ ಸರಿಯುತ್ತಿದ್ದರು. ಶರಣರು, ಶಿಷ್ಟರು, ಸಾಧುಗಳು, ಸಾತ್ವಿಕರನ್ನು ಮನಬಂದಂತೆ ಹಿಂಸಿಸಿ ಕೇಕೆ ಹಾಕುತ್ತಾ ಬಾಳುತ್ತಿದ್ದರು ಆ ದುಷ್ಟ ದಾನವರು.

**"ನರಹತ್ಯೆ ನಡೆಸಿದರು ಹೆದರದೆಯೆ ಹಿಂಸಕರು**
**ಹೊಳೆಯಾಗಿ ಹರಿಸಿತೈ ನರರ ರುಧಿರ**
**ಪುರ ಜನರ ಪರಿಜನರ ಶವಗಳಿಗೆ ಸುಡುಗಾಡೆ**
**ಅರಮನೆಯ ಆಶ್ರಯದ ಅಂತಃಪುರ"**

ಧರ್ಮವನ್ನು ಧಿಕ್ಕರಿಸಿ ನಿಂತ ಚುಂಚ-ಕಂಚರು ನರಮೇಧಕ್ಕೆ ಇಳಿದರು. ಕನ್ಯೆಯರು, ಸಾಧ್ವಿಯರನ್ನು ಮನ ಬಂದಂತೆ ಹಿಂಸಿಸಿ ರುಧಿರದ ಹೊಳೆಯನ್ನೇ ಹರಿಸಿದರು. ಮಾತೆಯರು ಮುನಿಗಳು ಎಷ್ಟೇ ಕೇಳಿಕೊಂಡರೂ ಲೆಕ್ಕಿಸದ ರಕ್ಕಸರು ಹಿಂಸೆಯಲ್ಲೆ ಆನಂದ ಕಂಡರು.

ಯೋಗಿಗಳು, ಯಾಜ್ಞಿಕರು, ಮಹಾತ್ಮರ ಜೀವಗಳನ್ನು ಯಮನ ಪುರಿಗೆ ಕಳುಹಿದರು; ಕನ್ಯೆಯರ ಕಣ್ಣೀರು ಹೊನಲಾಗಿ ಹರಿಯಿತು. ಯೋಗಿಗಳ ಯಾಗವನ್ನು ಕೆಡಿಸುತ್ತಿದ್ದ ರಾಕ್ಷಸರು, ನಿಶಾಚರರಾಗಿ ಕಾಡುತ್ತಿದ್ದರು. ಇಡೀ ಊರಿಗೆ ಊರೇ 'ದನುಜರನು ದಂಡಿಸುವ ಶೂರರಾರು?' ಎಂದು ಪರಿತಪಿಸುವಂತಾಯಿತು. ಅನೇಕ ಸ್ತ್ರೀಯರಂತೂ ದೌರ್ಜನ್ಯ ಸಹಿಸದೆ ಸಾವಿಗೇ ಶರಣಾದರು.

**"ಚೀರಿದರು ಚಿನ್ನರೂ ಮಾತೆಯರು ಮಡಿದಿರಲು**
**ದುಃಖಿಸುತ ದುರ್ಜನರ ಹಿಂಸೆಯಿಂದ**
**ನೆರಳಿರದೆ ನಿಲ್ಲಲ್ಕೆ ಹಾಲಿರದೆ ಹಸಿವನ್ನು**
**ತಣಿಸಲ್ಕೆ ತೆವಳಿದವು ನೋವಿನಿಂದ"**

ಮರ್ಮಜ್ಞರೆನಿಸಿದ ಮುನಿಗಳನ್ನು ಮನಬಂದಂತೆ ದುರುಳರು ದಂಡಿಸಿದಾಗ, ಅವರೆಲ್ಲ ಆತ್ಮಹತ್ಯೆಗೆ ಶರಣಾದರು; ಗರಿಗೆದರಿ ಘೀಂಕರಿಸಿ ಘಾತುಕರು ಘೂರ್ಣಿಸಿ ಅಮಾಯಕರನ್ನು ದಹಿಸಿದರು; ಪುರ ಜನರು, ಪರಿ ಜನರು, ಪಾಮರರು, ಪಂಡಿತರು, ಅಶಕ್ತರು, ಅಬಲೆಯರು, ಋಷಿವರ್ಯರುಗಳು ಮೃಗಧರನಾದ ಈಶ್ವರನನ್ನು ಪ್ರಾರ್ಥಿಸಿದರು. ಅವರುಗಳು ಪ್ರಾರ್ಥನೆ ಮಾಡಿದ ರೀತಿ ಹೇಗಿತ್ತೆಂದರೆ:

**"ಮಾರ್ತಾಂಡ ಮುಕ್ಕಣ್ಣ ಶಶಿಧರನೆ ಶಂಕರನೆ**
**ಲಲಿತಾಂಗ ಲಯಕರ್ತ ರಕ್ಷಿಸಯ್ಯ**
**ಧೂರ್ತರನು ಧರ್ಮಘಾತುಕರನ್ನು ಥಳಿಸುತ್ತ**
**ಸತ್ಯ, ದಯೆ, ಶಾಂತಿಯಂ ಸ್ಥಾಪಿಸಯ್ಯ"**

ಅಮಾಯಕರ ಮೊರೆ ಕೇಳಿದ ಈಶ್ವರ, ಖಳರುಗಳನ್ನು ಸಂಹರಿಸಲು ತ್ರಿಶೂಲಧಾರನಾಗಿ ಹೊರಟ. ಕ್ರೂರಿಗಳ ಕೊಚ್ಚುತ್ತ ಕರುಣೆಯೇ ಇಲ್ಲದಂತೆ ವರ್ತಿಸುತ್ತಿರುವುದನ್ನು ಧೂರ್ಜಟ ನೋಡಿದ. ಈಶ್ವರನ ಢಮರುಗದ ದನಿಯಿಂದ **"ಬೆದರಿತ್ತೈ ಬನವೆಲ್ಲ, ನಡುಗಿತ್ತೈ ನಗವೆಲ್ಲ"**, ಕ್ರೂರಿಗಳ ವಿರುದ್ಧ ಈಶ ಯುದ್ಧ ಸಾರುತ್ತಾನೆ. ಈಶನ ಬರುವಿಕೆ ಕಂಡು ದುರುಳ ಸಹೋದರರು **"ಸಿಟ್ಟಿನಿಂದ ಸೆಣಸಿದರು; ಕಡುಕೋಪ ತಾಳುತ್ತ, ಹರನನ್ನು ಹಿಡಿಯಲ್ಕೆ ಹೆಣಗಿದರು"**, ಈಶ್ವರ ಮತ್ತು ಚುಂಚ–ಕಂಚರ ನಡುವೆ ನಡೆದ ಯುದ್ಧವನ್ನು ಎರಡೇ ಎರಡು ಪದ್ಯದಲ್ಲಿ ಕವಿ ಹನುಮೇಗೌಡರು ಎಷ್ಟು ಸ್ವಾರಸ್ಯಕರವಾಗಿ ವರ್ಣಿಸುತ್ತಾರೆಂದರೆ:

**ರಕ್ಕಸರು ರಣದಲ್ಲಿ ಬಾಣಗಳ ಬಿಟ್ಟರೈ**
**ಶೂಲಿಯನು ಸೋಲಿಸಲು ಮಿಂಚಿನಂತೆ**
**ಸೊಕ್ಕಿನಿಂ ಸೆಣಸಿದರು ಮುತ್ತಿದರು ಮೃಡನನ್ನು**
**ಚಿಟ್ಟೆಗಳು ಚಿತೆಯನ್ನು ಮುತ್ತುವಂತೆ**

**ಕೋಪದಿಂ ಕುದಿಯಿತೈ ಮೃದುವಾದ ಮೃಡನ ಮನ**
**ಬೆಂಕಿಯಿಂ ಬೆಣ್ಣೆ ತಾ ಕುದಿಯುವಂತೆ**
**ಅಪ್ಪಳಿಸಿ ಅಸುರರನು ಕೊಂದನೈ ಕರ್ಪದಿಯು**
**ಕಳೇಬರ ಕಂಡವೈ ಬೆಟ್ಟದಂತೆ**

ದುರ್ಜನರ ದುರ್ನೀತಿ, ಷಡ್ಯಂತ್ರ ಸೊಲ್ಲಡಗಿತು; ನಲ್ಲೆಯರು. ಮುನಿವರ್ಯರು, ಬೆಟ್ಟದಂತೆ ಜೋಡಿಸಿದ್ದ ರಕ್ಕಸರುಗಳ ದೇಹಗಳು ದಹನವಾಗುತ್ತಿರುವುದನ್ನು ಕಂಡು ಬೆದರುತ್ತಾರೆ. ತಾಪಸಿಗಳು ಸಂತಸದ ಸಾಗರದಲ್ಲಿ ಮಿಂದೆದ್ದರು, ಬಹುಕಾಲ ರಕ್ಕಸರಿಂದ ನರಳಿದ್ದ ಅಬಲೆಯರು ನಿಟ್ಟುಸಿರು ಬಿಟ್ಟರು. ಅವರುಗಳೆಲ್ಲ "ಬಾಳಿನಲ್ಲಿ ಬೆಳಕನ್ನು ಕಂಡರೈ" ಎಂದು ಕವಿ ವರ್ಣಿಸುತ್ತಾರೆ.

ಚುಂಚ-ಕಂಚರ ದಮನ ಪ್ರಕರಣದಲ್ಲಿ, ಚುಂಚ-ಕಂಚರನ್ನು ರಾಕ್ಷಸರೆಂದು ವರ್ಣಿಸಲಾಗಿದೆ. ಅವರಿಂದ ಅಬಲೆಯರಾದ ಸ್ತ್ರೀಯರಿಗೆ, ಋಷಿಮುನಿಗಳಿಗೆ, ನಾನಾ ರೀತಿಯ ಕೇಡುಂಟಾಯಿತೆನ್ನುವ ವಿವರಗಳಿವೆ. ಮಧ್ಯ ಏಷ್ಯಾದಿಂಡ ಭಾರತಕ್ಕೆ ಬಂದ ಆರ್ಯರುಗಳು, ದ್ರಾವಿಡರನ್ನು ರಾಕ್ಷಸರೆಂದು ಪರಿಗಣಿಸಿದ್ದಾರೆ; ಔತ್ತರೇಯ ಕವಿಗಳು ದಾಕ್ಷಿಣಾತ್ಯರನ್ನು ರಾಕ್ಷಸರು ಎಂದು ಕರೆದಿದ್ದಾರೆ; ಸಂಸ್ಕೃತ ಬಲ್ಲ ಜನರು, ಸಂಸ್ಕೃತೇತರರನ್ನು ರಾಕ್ಷಸರೆಂದು ಪರಿಗಣಿಸುತ್ತಾರೆ. ಒಳ್ಳೆಯದರ ಕೆಟ್ಟದರ ನಡುವಿನ ಯುದ್ಧ ಬಹು ಹಿಂದಿನ ಕಾಲದಿಂದಲೂ ನಡೆದು ಬಂದಿರುವಂಥದ್ದು, ದ್ರಾವಿಡ ಜನಾಂಗದ ಪ್ರತಿನಿಧಿಯಾಗಿ ಚುಂಚ-ಕಂಚರನ್ನು ಕಲ್ಪಿಸಿಕೊಳ್ಳಲಾಗಿದೆ; ಎನ್ನುವುದು ಡಾ.ಕೆ.ರಾಜೇಶ್ವರಿಗೌಡರವರ ಅಭಿಪ್ರಾಯವಾಗಿದೆ. (***ಆದಿಚುಂಚನಗಿರಿ: ಒಂದು ಸಾಂಸ್ಕೃತಿಕ ಅಧ್ಯಯನ: ಪುಟ:೧೮೦**). ಧರ್ಮ ಅಥವಾ ಸಾತ್ವಿಕ ಗುಣದ ಸಂಕೇತವಾದ ಶಿವನು, ಚುಂಚ-ಕಂಚರೆಂಬ ರಕ್ಕಸರನ್ನು ಸಂಹಾರ .ಮಾಡಿ ಧರ್ಮೋದ್ಧಾರ ಮಾಡಿದುದು ಈ ಕಾವ್ಯದ ಒಂದು ಮುಖ್ಯ ಎಳೆಯಾಗಿದೆ. ಈ ಬಗ್ಗೆ ಹಲವು ಭಿನ್ನಾಭಿಪ್ರಾಯಗಳಿರುವುದು ಸಾಧ್ಯ. ರಾಕ್ಷಸರು, ದೈತ್ಯರು, ಅಸುರರು ಎಂಬುದಕ್ಕೆ ಹೇಗೆ ಬೇರೆ ಬೇರೆ ವಿವರಣೆಗಳಿವೆಯೋ ಹಾಗೆಯೇ ಸುರರು, ದೇವತೆಗಳು ಎಂಬುದಕ್ಕೆ ಕೂಡ ಹಲವು ಅಭಿಪ್ರಾಯಗಳಿವೆ. ಚುಂಚ-ಕಂಚರು ದ್ರಾವಿಡರೆಂದು ಭಾವಿಸುವುದಾದರೆ, ಈಶ್ವರನನ್ನು 'ದ್ರಾವಿಡರ ದೇವತೆ' ಎಂದು ಗುರುತಿಸುವುದರಿಂದ, ದ್ರಾವಿಡ, ದಾವಿಡರೇ ಏಕೆ ಸೆಣಸುತ್ತಾರೆ? ಎನ್ನುವ ಪ್ರಶ್ನೆ ಏಳುತ್ತದೆ. ಹೀಗಾಗಿ ಇದನ್ನು ಸಾತ್ವಿಕ ಮತ್ತು ತಾಮಸ ಶಕ್ತಿಗಳ ನಡುವಿನ ಸಂಘರ್ಷ ಎಂದಷ್ಟೇ ಪರಿಗಣಿಸುವುದು ಸೂಕ್ತ.

ದುಷ್ಟ ಶಕ್ತಿ ಮತ್ತು ಸಾತ್ವಿಕ ಶಕ್ತಿಗಳ ನಡುವೆ ಸಂಘರ್ಷವಾದ ಮೊಟ್ಟಮೊದಲ ಪ್ರಸ್ತಾಪ ಕಾಣುವುದು ಇಂದ್ರ ಮತ್ತು ವೃತ್ತಾಸುರರ ನಡುವಿನ ಸೆಣಸಾಟ ಪ್ರಕರಣದಲ್ಲಿ. ಇಲ್ಲಿ ವೃತ್ತಾಸುರ, ಮಾನವ ಲೋಕದ ಸಂಕಷ್ಟಗಳಿಗೆ ಕಾರಣವಾದ ದುಷ್ಟ ಶಕ್ತಿಗಳನ್ನು ಸಂಕೇತಿಸಿದರೆ, ಇಂದ್ರ, ಮಾನವ ಲೋಕದ ಹಿತ, ಸುಖ, ಸಂತೋಷಗಳಿಗೆ ಕಾರಣವಾದ ಸಾತ್ವಿಕ ಶಕ್ತಿಗಳನ್ನು ಪ್ರತಿನಿಧಿಸುತ್ತಾನೆ. (* ಹೆಚ್ಚಿನ ವಿವರಗಳಿಗೆ ನೋಡಿ: **"ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ" ಲೇ.ಕೆ.ಎಲ್.ಗೋಪಾಲಕೃಷ್ಣಯ್ಯ, ಪ್ರ. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಪುಟ:೧೭೬ ಮತ್ತು ೧೭೭**) ರಾಮ-ರಾವಣರ ಯುದ್ಧ, ಪಾಂಡವ-ಕೌರವರ ಸೆಣಸಾಟಗಳೆಲ್ಲ ಈ ನೆಲೆಯಲ್ಲೇ ಸೃಷ್ಟಿಯಾಗಿರಬಹುದೆನಿಸುತ್ತದೆ.

# ಚುಂಚಾದ್ರಿ ಪರಿಸರ

ಚುಂಚ–ಕಂಚ ರಕ್ಕಸರುಗಳ ದಮನ ಮಾಡಿ, ಬ್ರಹ್ಮ–ವಿಷ್ಣುಗಳ ನಡುವೆ ಎದ್ದ ವ್ಯಾಜ್ಯ ಪರಿಹರಿಸಿದ ಈಶ್ವರನಿಗೆ ಚುಂಚಾದ್ರಿ ನಾಡು ತಪಸ್ಸಿಗೆ ಯೋಗ್ಯ ಸ್ಥಳವೆನಿಸಿದೆ ಎಂದು ಕವಿ ಹನುಮೇಗೌಡರು '**ಚುಂಚಾದ್ರಿ ಪರಿಸರ**'ವನ್ನು ವರ್ಣಿಸಲೆತ್ನಿಸಿದ್ದಾರೆ:

**"ರಸ ಋಷಿಯ ರಮ್ಯ ನೆಲೆ ಯತಿವರರ ಯೋಗ ನೆಲೆ**
**ಕಮನೀಯ ಕಾವೇರಿ ಹರಿವ ನಾಡು**
**ಈಶನಿಗೆ ಇಲ್ಲಿತ್ತು ತೇಜಮಯ ತಪಗೈಯೆ**
**ಚೊಕ್ಕುಳದ ಚುಂಚನಾ ಕಟ್ಟೆ ಬೀಡು"**



–ಇಲ್ಲಿನ 'ಕಾವೇರಿ', ಭಗೀರಥ ಗಂಗೆಯನ್ನು ದೇವಲೋಕದಿಂದ ತಂದಂತೆಯೇ, ಅಗಸ್ತ್ಯರು ಕರುನಾಡಿಗೆ ತಂದಿರುವಂಥದ್ದು ಎಂದು ಭಾವಿಸುವ ಕವಿ ಮನಸ್ಸು ಉಲ್ಲಾಸವನ್ನೂ, ನಾಡ ಮೇಲಿನ ಭಕ್ತಿಯನ್ನೂ ಪ್ರಕಟಿಸುವಂಥದ್ದಾಗಿದೆ. "ಚಂದ್ರಮನ ಚಂದ್ರಿಕೆಯು ಚಕಚಕಿಸಿ ಚೆಲ್ಲಿದೆ; ತಂಪಾದ ತೆಳುಗಾಳಿ ಬೀಸಿದೆ; ಬೆಳದಿಂಗಳಿನ ಸುಧೆಯಲ್ಲಿ ಮಲೆಸಾಲು ಮೋಡಗಳು ಮೈಮರೆತು ಮಲಗಿವೆ; ಕೋಗಿಲೆಗಳು ಕಮನೀಯ ಕಂಠದಿಂದ ವಸಂತ ಋತುವಿನ ಚೇತನವನು ಕರೆಯುತಿವೆ; ಕರಿ ಹರಿಣಿ ಕೇಸರಿಗಳು ಮತ್ಸರವನ್ನು ಮರೆತಿವೆ; ಬಳಕುವ ಬಳ್ಳಿಗಳು ತಾವು ಕಲಿತ ನಾಟ್ಯ ವಿದ್ಯೆಯನ್ನು ಶಿವನಿಗೆ ತೋರಿಸುತ್ತಿವೆ; ತಂಗಾಳಿ ಬೀಸುವಿಕೆಯಿಂದ ಬಾಗಿದ ವೃಕ್ಷಗಳು ಶಂಕರನಿಗೆ ವಂದಿಸುತ್ತಿವೆ"; – ಇಂಥ ಸುಮನೋಹರ ಪರಿಸರದಲ್ಲಿ ಶಿವ ತಪಸ್ಸು ಮಾಡುತ್ತನೆ. **"ಮಹತ್ವದ ಮೃಡನ ತಪ ಶಾಂತಿಯನು ಸಾರಿತ್ತು ಚೆಲುವಾದ ಚುಂಚನಾ ಕಟ್ಟೆಯಲ್ಲಿ"** ಎಂದು ಕವಿ ಶಿವನ ತಪಸ್ಸಿನ ಪರಿಣಾಮ ಕುರಿತು ಹೇಳುತ್ತಾರೆ.



ಸೀತೆ ರಾವಣನಿಂದ ಅಪಹರಣಗೊಂಡ ಕಾರಣ, ರಾಮ–ಲಕ್ಷ್ಮಣರು ಸೀತೆಯನ್ನು ಹುಡುಕಿ ಕಾಡಿನಲ್ಲೆಲ್ಲ ಅಲೆವ ಚಿಕ್ಕ ಪ್ರಸಂಗವೊಂದನ್ನು ಕವಿ **"ಚುಂಚಾದ್ರಿ ಚಂದ್ರಿಕೆ"**ಯಲ್ಲಿ ತಂದಿದ್ದಾರೆ. ಸೀತೆಯಿಂದ ದೂರವಾದ ರಾಮ ಬಹುವಾಗಿ ದುಃಖಿಸುತ್ತ ಮಮ್ಮಲ ಮರುಗುತ್ತಾನೆ. ಲಕ್ಷಣ ಅಣ್ಣನನ್ನು ನಾನಾ ವಿಧದಲ್ಲಿ ಸಂತೈಸಿ, '**ಈಶ್ವರನಲ್ಲಿ ನಿನ್ನ ಸಂಕಟ ತೋಡಿಕೋ**' ಎಂದು ಸಲಹೆ ನೀಡುತ್ತಾನೆ. ರಾಮ ಈಶನನ್ನು ನೆನೆದಾಗ, ಪಾರ್ವತೀ ಸಹಿತನಾಗಿ ಈಶ್ವರ ರಾಮನಿದ್ದಲ್ಲಿಗೆ ಬಂದು ಧೈರ್ಯದ ಮಾತುಗಳನ್ನಾಡಿ ಸಂತೈಸುತ್ತಾನೆ. ರಾಮನ ಸಂತೈಕೆಯ ನಂತರ ಶಿವ–ಪಾರ್ವತಿಯರು ಮತ್ತೆ ಚುಂಚನಗಿರಿಗೆ ಬರುತ್ತಾರೆ. **"ಮೃಡನಾಗ ಮಡದಿ ಜೊತೆ ಚೆಲುವಿನಾ ಚುಂಚಾದ್ರಿ, ತಾಣಕ್ಕೆ ತೆರಳಿದನು ತಪ ಮಾಡಲು"** ಎಂದು ಕವಿ ವರ್ಣಿಸುತ್ತಾರೆ.

ಈಶ್ವರನಿಗೆ '**ಚುಂಚನಗಿರಿ**' ತಪಃ ಕ್ಷೇತ್ರವಾಗಿ ಕಂಡು ಬಂದಿದೆ. ಕವಿ ಹನುಮೇಗೌಡರು ಸಂಚಿಕೆ–೬ಕ್ಕೆ **"ಚುಂಚಾದ್ರಿ ಚೆಲುವ ನೋಡ"** ಎನ್ನುವ ತಲೆಬರಹ ನೀಡಿ, ಚುಂಚಾದ್ರಿ ಸೊಗಸನ್ನು

ಸಂಚಿಕೆ ತುಂಬೆಲ್ಲ ವರ್ಣಿಸುತ್ತಾರೆ. ಪ್ರತೀ ವರ್ಣನೆಯೂ ಕವಿಯ ಸೌಂದರ್ಯಾನುಭವ, ರಸ ಸಿದ್ಧಿಗಳನ್ನು ಪ್ರಕಟಗೊಳಿಸುತ್ತದೆ. **"ಭೂಮಿಯಿದು ಭರ್ಗನಿಗೆ ನೆಮ್ಮದಿಯ ನೀಡುತಿಹ ನೆಲೆಯಾಯ್ತು ನಿತ್ಯ ತಪ ಮಾಡೆ ಇಹದಿ"** ಎನ್ನುತ್ತಾರೆ ಕವಿ.

**"ನವಿಲುಗಳು ನರ್ತಿಸುತ ನಲಿಯುತ್ತ ನಡೆಯುತ್ತ**
**ಗರಿಗೆದರಿ ಗಿರಿಯಲ್ಲಿ ಹಾರುತಿಹವು**
**ನವಿಲುಗಳ ನೋಡುತಲೆ ನಾಗಗಳು ನಡುಗುತ್ತ**
**ಹೆದರುತ್ತ ಹೆಡೆಗಳನು ಹುದುಗಿಸಹವು"**

–ಎನ್ನುವ ವರ್ಣನೆ ಕೇವಲ ಪ್ರಾಣಿ–ಪಕ್ಷಿಗಳ ನಡವಳಿಕೆ ಕುರಿತು ಬಂದಂಥದ್ದಲ್ಲ. ಚುಂಚನಗಿರಿ ಪರಿಸರದ ವೈಶಿಷ್ಟ್ಯತೆ ಏನೆಂದರೆ, ಸಾತ್ವಿಕ ಮನೋವೃತ್ತಿಯ ಮುಂದೆ, ಧಾಷ್ಟ್ಯ ಮನೋವೃತ್ತಿ ಶರಣಾಗಲೇ ಬೇಕಾಗುತ್ತದೆ ಎನ್ನುವ ಸತ್ಯ ಇಲ್ಲಿ ಅನಾವರಣಗೊಂಡಿದೆ. **"ನವಿಲು"** ಸಾತ್ವಿಕತೆಗೆ, ನಾಗಗಳು **"ಧಾಷ್ಟ್ಯತೆ"**ಗೆ ಸಂಕೇತಗಳಾಗಿ ನಿಂತು, ತಪೋಭೂಮಿಯ ತಾಪಸಿಗಳ ಶಕ್ತಿ ಎಂಥದ್ದೆಂಬುದನ್ನು ಪ್ರಕಟ ಪಡಿಸಿವೆ.

ಶಿವನು ತಪಗೈಯಲು ಸಾವಕಾಶವಾಗುವಂತೆ ಹಕ್ಕಿಗಳ ಗುಂಪೇ ಅವನಿಗೆ ಸ್ವಾಗತ ನೀಡುತ್ತಿವೆ. **"ಶರೀರವು ಸುಂದರವು. ನಯನಗಳು ನಯವಿಹವು, ಪುಚ್ಚ ಮೇಣ್ ಪುಕ್ಕಗಳ ರೆಕ್ಕೆ ನುಣುಪಿ"**ನಿಂದ ಕೂಡಿರುವ ಪಾರಿವಾಳಗಳು ಶಿವನನ್ನು ಹುಡುಕುತ್ತಿವೆ; ಕೋಗಿಲೆಗಳು ಇಂಪಾದ ಕಂಠದಿಂದ ಕೂಗುತ್ತ **"ಚುಂಚಾದ್ರಿ ಚಂದವನು ಸಾರುತ್ತಿವೆ"** ಹಂಸಗಳು ತಪ್ಪಾದ ಕೊಳದಲ್ಲಿ **"ಬಾನಲ್ಲಿ ಬಿಳಿಮೋಡ ತೇಲುವಂತೆ, ಜಲದಲ್ಲಿ ಜಿಗಿಯುತಿವೆ"**; ಅವು ಅಲ್ಲಿ ಜಿಗಿದೇಳುವಾಗ ಉಂಟಾಗುವ ಕಲರವ, ಶಿವನಿಗೆ ಅರ್ಪಿಸಿದ ಮಂಗಳಯುತ ಮಂತ್ರದಂತಿದೆ!;

**"ಹಚ್ಚನೆಯ ಹಸಿರಿರುವ ತರುಗಿಡದ ತುದಿಯಲ್ಲಿ**
**ಸಂತಸದಿ ಶುಕ ಕೆಲವು ಉಲಿಯುತ್ತಿವೆ**
**ಬಿಚ್ಚುತ್ತ ಬರಬರನೆ ರದ್ದುತ್ತ ರೆಕ್ಕೆಗಳ**
**ಹಲ ಕೆಲವು ಹಿಂಡುಗಳು ಹಾರುತ್ತಿವೆ"**

ಗಿಳಿಗಳ ಗುಂಪು ಹಸನಾದ ಹಣ್ಣುಗಳನ್ನು ಕೊಕ್ಕಿನಿಂದ ಕುಕ್ಕುತ್ತ **"ರಸವನ್ನು ರಾಗದಿಂ ಸವಿಯುತಿವೆ"**; ರೆಕ್ಕೆಗಳಲ್ಲಿ ಹೊಸತನದ ಹಸಿರು ಮೂಡಿ **"ಮೈಮರೆತು ಮೋದದಿಂ ಮೆರೆಯುತಿಹವು"** – ಎಂದು ಕವಿ ಹೃದಯ ತುಂಬಿ ವರ್ಣಿಸುತ್ತಾರೆ.

ಪಕ್ಷಿಗಳಂತೆಯೇ ಪ್ರಾಣಿಗಳು ಕೂಡ ಕಾಡಿನಲ್ಲಿ ಸಹಜವಾಗಿ ಬದುಕುತ್ತಿವೆ. ಅದರಲ್ಲೂ ಈಶ್ವರನ ಸಾನ್ನಿಧ್ಯದಿಂದ ಅವುಗಳಲ್ಲಿ ಹೊಸ ಕಳೆ, ಚೇತನ ತುಂಬಿಕೊಳ್ಳುತ್ತಿದೆ.

**"ಮೊಲ ವೃಂದ ಮರಿಗಳನು ಆಡಿಸುತ ಅಲೆಯುತಿದೆ**
**ಬೆಟ್ಟದಲ್ಲಿ ಬಹಳವಿದೆ ಚುಕ್ಕೆಯಂತೆ**
**ಹಲವಾರು ಹಸಿರ ಪೊದೆ ಗಿಡಗಳಲಿ ಗುಣಿಗಳಲಿ**
**ಕುಳಿತಿಹುದು ಕಾಣುತಿದೆ ಹೂಗಳಂತೆ"**

ಬಂಡೆಗಳ ಬದಿಯಲ್ಲಿ ಕಾಣುತ್ತಿರುವ ಕರಿಹಿಂಡು, ಹೆಮ್ಮೆಯಿಂದ, ಹ್ಲಾದದಿಂದ ಚಲಿಸುತ್ತ ಹೊಂಡದಿಂದ ನೀರು ಹೀರಿ ಗಣಪತಿಗೆ ಜಳಕ ಮಾಡಿಸುತಿವೆ; ತಾಯಿ ಅನೆ ತನ್ನ ಮರಿಗೆ ತಿನಿಸು ಉಣಿಸುವಾಗ **"ಮರಿಯನ್ನು ಮಾತೆ ಕರಿ ಶುಂಡದಿಂ ಸವರುತಿರೆ ವಾತ್ಸಲ್ಯ ವಾರಿಧಿಯು ಹರಿಯುತಿಹುದು", "ಮತ್ಸ್ಯಗಳು ಮಡುವಿನಲಿ ಇಕ್ಕರಿಸಿ ಈಜುತಿವೆ", "ಮುಳುಗುತ್ತ ಮರಿ ಮೀನುಗಳು ಬುಳಬುಳನೆ ಭಯದಿಂದ ಮಿಳರ್ಚಿಸಿ ಮತ್ತೆ ಬರುತಿಹವಲ್ಲಿ"; "ಮಡುವಿನಲ್ಲಿ ಮನೆ ಮಾಡಿ ಮರೆಯುತ್ತಿರೆ ಮಕರಗಳು"**, ಇತರೆ ಜೀವಿಗಳಿಗೆ ಇಡೀ ಮಡುವೇ ಮೃತ್ಯುವಿನ ಪಾಷದಂತೆ ಕಾಣಬರುತ್ತಿವೆ; **"ಕಾಡು ಮೃಗ ಕುಡಿಯೆ ಬರೆ ಸಿಹಿ ನೀರ ಸರಸ್ಸಿಗೆ, ಮಹತ್ತರ ಮೃಷ್ಟಾನ್ನ ಮಕರಗಳಿಗೆ"**

**"ಬಿಸಿಲಿನಲಿ ಬಂಡೆಗಳ ಮೇಲ್ಗಡೆಯೆ ಮೊಸಳೆಗಳು**
**ಮೈಯೊಡ್ಡಿ ಮಲಗಿಹವು ಅಂಚಿನಲ್ಲಿ**
**ಉಸಿರೆಳೆಯೆ ಉಬ್ಬುವುವು ಹೊಳ್ಳೆಗಳು ಹೊಟ್ಟೆಗಳು**
**ಕೋರೆಗಳು ಕಾಣುವುವು ಬಾಯಿಯಲ್ಲಿ"**

ಹುಲಿ ಸಿಂಹಗಳು ಹಾರುತ್ತ ಹರಿಣಿಗಳ ಹಿಡಿಯುತ್ತಿರಲು, **"ಮುಳ್ಹಂದಿ ಮೈಗೆದರಿ ಮೇಲೆರಗೆ ಮುಳ್ಳುಗಳು. ಬಾಣವನು ಬಿಟ್ಟಂತೆ ತೋರುತಿಹವು"**

ಪ್ರಾಣಿಗಳ ವರ್ಣನೆಯಲ್ಲಂತೂ ಕವಿ, ಪ್ರತೀ ಪ್ರಾಣಿಯ ನಡವಳಿಕೆಯನ್ನು ಸೂಕ್ಷ್ಮವಾಗಿ ಗಮನಿಸಿ, ಅಧ್ಯಯನ ಮಾಡಿ ಬರೆದಂತೆ ಕಾಣುತ್ತದೆ. ಕವಿಯಲ್ಲಿನ ಈ ಸೂಕ್ಷ್ಮ ಪ್ರಜ್ಞೆ ವರ್ಣನೆಯನ್ನು ಸಜೀವಗೊಳಿಸಿದೆ. ಪ್ರಾಣಿಗಳ ಕುರಿತಾದ ಕವಿಯ ಅದಮ್ಯ ಪ್ರೀತಿಗೆ ಇಂಥ ಪದ್ಯಗಳು ಸಾಕ್ಷಿಯಂತಿವೆ.

ಪ್ರಾಣಿಗಳ – ಪಕ್ಷಿಗಳ ವರ್ಣನೆಯ ನಂತರ ಕವಿ ಕೈಗೆತ್ತಿಕೊಳ್ಳುವುದು ಹೂವುಗಳನ್ನು,

**"ಬಳುಕುತಿಹ ಬಳ್ಳಿಗಳು ತಬ್ಬಿಹವು ತರುಗಳನು**
**ಬಿಟ್ಟಿಹವು ಬಹು ವಿಧದ ಪುಷ್ಪಗಳನು**
**ತಿಳಿ ನೀಲಿ ತಿಳಿಗೆಂಪು ಹಳದಿ ಬಿಳಿ ಹೂವುಗಳು**
**ಬೀರುತಿವೆ ಬಗೆ ಬಗೆಯ ಬಹು ಕಂಪನು"**

ಪುಷ್ಪ ವರ್ಣನೆಯಲ್ಲೂ ತಮ್ಮ ಪ್ರತಿಭೆ ತೋರುವ ಕವಿ **"ಸುಗಂಧದ ಸಂಪಿಗೆಯು ಮಂದಾರ ಮಲ್ಲಿಗೆಯು, ಪ್ರಫುಲ್ಲಿತ ಪುಷ್ಪಗಳು ಶೋಭಿಸುತಿವೆ, ಸೊಗಸಾದ ಸಾವಂತಿಗೆ ಮಲ್ಲಿಗೆ ಗಜಹಿಪ್ಪೆ ಜಪಾಸುಮ ಜಾಜಿಗಳು ರಾಜಿಸುತಿವೆ"** ಎಂದು ವಿವಿಧ ಬಗೆಯ ಹೂಗಳ ಹೆಸರುಗಳನ್ನು ನೆನೆದುಕೊಳ್ಳುತ್ತಾರೆ. **"ಪರಿಮಳದ ಪುಷ್ಪಗಳ ಪರಿಪಕ್ವ ಪಣ್ಣುಗಳ"** ಸಿರಿ ನಾಡು **'ಚುಂಚಾದ್ರಿ'** ಎನ್ನುವುದು ಕವಿಯ ಅಭಿಪ್ರಾಯ.

ಬಾನುದ್ದ ಬೆಳೆದಿರುವ ಕಡುನಿಬಿಡ ಕಾನನದಲ್ಲಿ, ಹಸಿರಾದ ಹೆಮ್ಮರಗಳು ಹುಲುಸಾಗಿ ಬೆಳೆದಿವೆ. ವಿವಿಧ ಜಾತಿಯ ಮರಗಳ ಪಟ್ಟಿಯನ್ನೇ ಕೊಡುವ ಕವಿ, **"ವೃಕ್ಷಗಳು ವಿನಯದಲಿ ತಳಿರುಗಳ ತೋರಣದಿ ಸುಮನಗಳ ಸರ ಹಾಕಿ ನಮಿಸುತಿಹವು"** ಎನ್ನುತ್ತಾರೆ.

“ಹುಲಿಗೆಮರ ಹಿಪ್ಪೆಮರ ಅರಳಿಮರ ಅರಳೆಮರ
ಅಂಕೋಲೆ ಅಮಟೆಮರ ಬೇವುಗಳಿವೆ
ಹುಳಿಬೇಲ ಹುಣಸೆಮರ ಹೊನ್ನೆಮರ ಹೊಂಗೆಮರ
ನೆಲ್ಲಿಮರ ನಿಂಬೆಮರ ಮಾವುಗಳಿವೆ’

“ಗೇರು ಮರ ಗೋಣಿ ಮರ ಸಾಲಿ ಮರ ಶಿವನೆ ಮರ
ಬನ್ನಿ ಮರ ಬಸರಿ ಮರ ದೇವದಾರು
ವೀರತರು ವಟವೃಕ್ಷ ಕುದ್ದಾಲಾ ಕೃತಮಾಲಾ
ಬೆಳೆದಿಹವು ಬೇಲ ಹಲಸು ಅಗರುತರು”

ಹೀಗೆ ಕಾಡಿನ ಮರಗಳ ಹೆಸರುಗಳನ್ನೆಲ್ಲ ಒಂದೆಡೆ ಪೋಣಿಸಿ ಪದ್ಯ ಹೆಣೆದಿರುವ ಕವಿ ವೃಕ್ಷಗಳ ವನಸಿರಿಯನ್ನು ಹರನೊಂದಿಗೆ ತಾವೂ ಸವಿದಿದ್ದಾರೆ. ‘ನವ್ಯತೆಯ ನವೋದಯ’ವನ್ನು ಹರ ಕಂಡಂತೆ, ಭವ್ಯತೆಯ ಬುಗ್ಗೆಯನ್ನು ಕವಿ ಕಂಡಿದ್ದಾರೆ.

ಕವಿ ಚುಂಚಾದ್ರಿಯನ್ನು **“ವಸುಂಧರೆ ವದನದಲಿ ಧರಿಸಿರುವ ದಿವ್ಯತರ ಚೇತನದ ತಿಲಕ”**ವೆಂದೇ ತಿಳಿದಿದ್ದಾರೆ. **“ಹುಲಿ ಆನೆ ಹುಲ್ಲೆಗಳು ಮಾತ್ಸರ್ಯ ಮರೆತು, ಮಲಗುತಿವೆ ಮಗ್ಗಲಲ್ಲಿ ನವಿಲು, ಹಾವುಗಳು”** ಎಂದಾಗ ಅಲ್ಲಿನ ಕಾಡಿನ ಅಂಗಗಳ ನಡುವಿನ ಸಾಮರಸ್ಯ ಅರ್ಥವಾಗುತ್ತದೆ. ಪ್ರಕೃತಿಯ ಪ್ರಾಂಜಲತೆ, ಸಮೀರದ ಸುಗಂಧ, ತಾಪಸಿಗೆ ಆನಂದ ತಂದು,

**“ನಿರಂತರ ನಿಸರ್ಗವು ಚಿಮ್ಮುತಿದೆ ಚೇತನವ
ತಾಪಸಿಗೆ ತಾಣವೀ ಶ್ರೇಷ್ಠ ವನವು
ಮೆರೆಯುತಿದೆ ಮೈಮರೆತು ಸೌಂದರ್ಯ ಸಿರಿನಿಧಿಯು
ತಪಮಾಡೆ ತಾಣವಿದು ಉತ್ಕೃಷ್ಟವು”**

ಎನಿಸುತ್ತಿದೆ. ಪಾರ್ವತಿಯೂ ರೋಮಾಂಚಿತಳಾಗಿ, ಪತಿಯ ಪಾದಗಳನ್ನು **“ಪರಿಪರಿಯ ಪರಿಮಳಗಳಿಂದ ತೊಳೆದಳು”** ಇಷ್ಟೆಲ್ಲ ಮನೋಹರ ಪರಿಸರದ ಪ್ರೇರಣೆಯಿಂದ ಪರಶಿವ, ತಪಸ್ಸಿನಲ್ಲಿ ನಿರತನಾದ. ಆತನ ತಪಸ್ಸಿಗೆ ಸಹಕರಿಸಲೆಂದೋ ಏನೋ ಇಡೀ ಪ್ರಕೃತಿಯೇ ಸ್ಪಂದಿಸುತ್ತಿದೆ:

**“ಹರನನ್ನು ಹಗಲಲ್ಲಿ ರವಿ ದೇವ ರಂಜಿಸಲು
ಕಮಲುಗಳು ಕರಗಳಿಂ ವಂದಿಸಿದವು
ಇರುಳಲ್ಲಿ ಈಶನನು ಶಶಿದೇವ ಸಂತೈಸೆ
ಕುಮುದಗಳು ಕೃತಜ್ಞತೆ ಅರ್ಪಿಸಿದವು”**

–ಹೀಗೆ **“ಚುಂಚಾದ್ರಿ ಚಂದ್ರಿಕೆ”** ಮಹಾಕಾವ್ಯದ ಪ್ರಮುಖ ಭಾಗವಾದ ಚುಂಚಾದ್ರಿ ಪರಿಸರ ವರ್ಣನೆ, ಹೆಚ್ಚು ನೈಜ ಮತ್ತು ಸಜೀವವಾಗಿ ಚಿತ್ರಿತವಾಗಿದೆ. ಕ್ಷೇತ್ರದ ಬಗ್ಗೆ ಕವಿಗಿರುವ ಒಲುಮೆ ಮತ್ತು ಭಕ್ತಿಗಳು ತುಡಿತವನ್ನು ಹೆಚ್ಚಿಸಿ, ಭಾವನಾತ್ಮಕ ವರ್ಣನೆಗೆ ಕಾರಣವಾಗಿವೆ. ಹೂವು–

ಮರಗಿಡ–ಪ್ರಾಣಿ–ಪಕ್ಷಿಗಳನ್ನು ಕುರಿತಂತೆ ಕವಿಗಿರುವ ಕಾಳಜಿ, ಸಾಮಾನ್ಯ ಜ್ಞಾನ ಮೆಚ್ಚುವಂಥದ್ದು. ಹಸಿರ ಸಿರಿಯ ಆಸ್ವಾದನೆ ಕವಿಯ ಪ್ರಧಾನ ಆಸಕ್ತಿಯಾಗಿದ್ದು, ಅಲ್ಲಿನ ಜೀವ ಚೈತನ್ಯದಲ್ಲಿ ತಮ್ಮನ್ನು ತಾವು ಮುಳುಗಿಸಿಕೊಳ್ಳುತ್ತಾರೆ. ಗಾಢ ಒತ್ತಡ ಮತ್ತು ತೀವ್ರ ತುಡಿತಕ್ಕೆ ಸಿಲುಕಿ ಕವಿ, **"ಹೇಳದಿರೆ ತಾಳಲಾರ"**ದವರಾಗಿ ಬಿಡುತ್ತಾರೆ.

"ಪ್ರಕೃತಿಯ ಅವಿನಾ ಜೀವಿಗಳು ನಾವು, ಪ್ರಕೃತಿಯ ಭಾಗ ನಾವಾದರೂ ಅದು ತೋರುವ ಚೆಲುವು ನೋಡುವ ಕಣ್ಣೂ ನಮಗಿಲ್ಲ; ಅದಕ್ಕಾಗಿ ವಿನಿಯೋಗಿಸಲು ಕಾಲವೂ ನಮ್ಮಲ್ಲಿಲ್ಲ. ಬೆಳಗ್ಗೆದ್ದರೆ ಹತ್ತು ಹಲ್ಲಂಡೆಗಳು, ನೂರು ಸಮಸ್ಯೆಗಳು, ಸಾವಿರ ಸವಾಲುಗಳಲ್ಲಿ ಮುಳುಗಿರುವವರು ನಾವು. ಹೀಗಾಗಿ ನಿಸರ್ಗಕ್ಕೆ ನಾವು ಕುರುಡು; ನಿಸರ್ಗ ನಮಗೆ ಬರಡು..... ಯಾರೋ ಒಬ್ಬ ರಸಿಕ **'ಭಲಾ'** ಎಂದಾಗ, ಸಾಹಿತಿಯೊಬ್ಬ ಸವಿದಾಗ, ಕವಿಯೊಬ್ಬ ಚೀರಿದಾಗ, ಸಾವಿರ ಕಣ್ಣ ನವಿಲು ಗರಿ ಬಿಚ್ಚಿದಾಗ ನಲ್ಲಿ ನೀರಿಗೆ ಮಂಗವೊಂದು ಮೂತಿ ಇಟ್ಟಾಗ, ನೀಲ ಗಗನದಲ್ಲಿ ಬೆಳ್ಳಿ ಹಕ್ಕಿಗಳು ಶಿಸ್ತಾಗಿ, ಬಾಣವಾಗಿ ಹಾರಿದಾಗ, ದೂರದಲೊಂದು ಕೋಗಿಲೆ **'ಕುಹೂ'** ಎಂದಾಗ, ತಂತಿಯ ಮೇಲೆ ಅಳಿಲೊಂದು ಓಡಿದಾಗ, ವಿಶಾಖದ ಗಿಡದಡಿಯ ಹುತ್ತದ ಮೇಲೆ ಗೋಧಿ ನಾಗರ ಹೆಡೆ ಬಿಚ್ಚಿ ಹೊಳೆದಾಗ – ಇಂತಹ ಅಪೂರ್ವ ಕ್ಷಣಗಳು ರೋಮಾಂಚನ ಮಾಡುತ್ತವೆ; ಹೃದಯ ಹಾಡುತ್ತದೆ; ಹರ್ಷ ಅಪ್ಪುತ್ತದೆ. ಆದರೆ ಅನುಭವಿಸಿದ ಸಂತಸವನ್ನು ನೆರೆಯವರಿಗೆ ಹಂಚಲು ನಮಗೆ ಆಗುವುದೂ ಇಲ್ಲ; ಶಕ್ಯವೂ ಅಲ್ಲ; ಆದರೆ ಮೂರನೆಯ ಕಣ್ಣಿನ ಕವಿಯೊಬ್ಬ ಮಾತ್ರ ಕಂಡದನ್ನು ಕಾಣಿಸಬಲ್ಲ ನಮಗೂ! ಅಂತಹ ಅಪೂರ್ವ ನಿಸರ್ಗದ ಕವಿಗಳಲ್ಲಿ ಮಾನ್ಯ ಹನುಮೇಗೌಡರು ಮಾನ್ಯರು; ಮೂರ್ಧನ್ಯರು" – ಎನ್ನುವ ಪಾವಗಡ ಪ್ರಕಾಶರಾವ್‌ರ ಮಾತುಗಳಲ್ಲಿ ಅತಿಶಯೋಕ್ತಿ ಕಾಣಲಾರೆವು.

# ನಾಥ ಪಂಥ ಮಹನೀಯರುಗಳ ಬೋಧನೆ

ನಾಥ ಪಂಥದ ವೈಶಿಷ್ಟ್ಯತೆ ಇರುವುದೇ ಅಲ್ಲಿನ ಸಾಧು ಸಂತರು ಸಮಾಜಕ್ಕೆ ಏನು ಬೋಧನೆ ಮಾಡಿದ್ದಾರೆ ಎನ್ನುವುದರಲ್ಲಿ. 'ಚುಂಚಾದ್ರಿ ಚಂದ್ರಿಕೆ' ಮಹಾಕಾವ್ಯದಲ್ಲಂತೂ ಹನುಮೇಗೌಡರು, ಸ್ವಾಮೀಜಿಗಳ ಬೋಧನೆ ವರ್ಣಿಸುವ ಸಲುವಾಗಿಯೇ ಸುಮಾರು ೧೦೦ ಪುಟಕ್ಕಿಂತಲೂ ಹೆಚ್ಚಿನ ಪುಟಗಳನ್ನು ಮೀಸಲಿರಿಸಿದ್ದಾರೆ. ಸಿದ್ಧಮುನಿ, ಕರ್ಮನಾಥನಿಗೆ ಪಟ್ಟ ಕಟ್ಟುವುದರಿಂದ ಹಿಡಿದು ಬಾಲಗಂಗಾಧರರವರೆಗೂ ೭೧ ನಾಥ ಗುರುಗಳ ಬೋಧನೆಯನ್ನು ವಿಸ್ತಾರವಾಗಿ ವರ್ಣಿಸಿದ್ದಾರೆ. ಒಬ್ಬೊಬ್ಬ ಸ್ವಾಮೀಜಿಯೂ ಒಂದೊಂದು ವಿಚಾರಕ್ಕೆ ಒತ್ತು ನೀಡಿದರೂ, ಎಲ್ಲ ಸ್ವಾಮೀಜಿಗಳ ಅಂತಿಮ ಬೋಧನೆ 'ಸಾತ್ವಿಕ ಜೀವನ ನಡೆಸಿರಿ' ಎನ್ನುವುದು; ಸತ್ಯ–ನ್ಯಾಯ–ಧರ್ಮ–ಅಹಿಂಸೆಗಳಿಗೆ ಅಪಚಾರವಾಗದಂಥ ಜೀವನ ಜನಗಳದ್ದಾಗಿರಬೇಕೆಂಬುದು ಅವರೆಲ್ಲರ ಅನಿಸಿಕೆಯಾಗಿದೆ. ಅವರು ತಮ್ಮ ಬೋಧನೆಗಾಗಿ ಜನ ಸಾಮಾನ್ಯರು ಬಳಸುತ್ತಿದ್ದ ಸ್ಥಳೀಯ ಭಾಷೆಯನ್ನು ಮಾಧ್ಯಮ ಮಾಡಿಕೊಂಡಿದ್ದರಿಂದ, ಅವರ ಬೋಧನಾಮೃತ ಎಲ್ಲ ಜನಗಳಿಗೆ ತಲುಪಲು ಸಾಧ್ಯವಾಗಿದೆ. ನಾಥ ಪಂಥ ಕ್ಷಿಪ್ರ ಗತಿಯಲ್ಲಿ ಜನಪ್ರಿಯವಾಗಲು ಇದೂ ಕೂಡ ಕಾರಣವಾಗಿದೆ.

ಶಿವನ ಅಂಶದಲ್ಲಿ ಹುಟ್ಟಿದ ಭೈರವನು ನಾಥ ಪಂಥದ ಪ್ರಚಾರಕ್ಕಾಗಿ ಸಿದ್ಧ ಮುನಿಗೆ ಪಟ್ಟ ಕಟ್ಟುತ್ತಾನೆ. ಸಿದ್ಧ ಮುನಿ, **"ಶಿವ ಶಕ್ತಿ ಮಹಿಮೆಯನು ಮನುಜ ಮನ ಮುಟ್ಟುವಂತೆ ಆದರದಿ ಅರುಹು"**ತ್ತಾನೆ:

**"ಸತ್ಯಕಿಂ ಶ್ರೇಷ್ಠತಮ ತಪವೊಂದು ತಾನಿಲ್ಲ**
**ದಾನಕಿಂ ಧರ್ಮ ಜಗದಲ್ಲೇ ಇಲ್ಲ**
**ಮಿಥ್ಯಕಿಂ ಮೃತ್ಯುಮಯ ಪಾಪಾಗ್ನಿ ಪುಟ್ಟಿಲ್ಲ**
**ಆಸೆಗಿಂ ಅತಿ ದುಃಖ ಬೇರೆಯಿಲ್ಲ"**

ಸತ್ಯ–ದಾನ–ಮಿಥ್ಯ–ಆಸೆಗಳನ್ನು ಕುರಿತು ಸಿದ್ಧಮುನಿ ತನ್ನ ಅನಿಸಿಕೆ ವ್ಯಕ್ತಪಡಿಸಿದ್ದಾನೆ. ವಿರಾಗಿಯು ವೈಭವಕ್ಕೆ ಹೆದರಿದರೆ, ಧನವಂತ ದರೋಡೆಗೆ, ಪಂಡಿತ ಪರಾಜಯಕೆ, ಪರಮಪಾಪಿ ಮರಣಕೆ, ರತಿ ಭೋಗಿ ರೋಗಕ್ಕೆ, ಕುಲೀನನು ಎಲ್ಲಿ ತನ್ನ ಕುಲ ಕೆಡುವುದೋ ಎಂದು ಹೆದರುತ್ತಾ ಬದುಕುತ್ತಾರೆಂಬ ಸಿದ್ಧಮುನಿ ವರ್ಣನೆಯಲ್ಲಿ, ಮನುಷ್ಯನಲ್ಲಿ ಸಹಜವಾಗಿರುವ **'ಸಂದರ್ಭಕ್ಕೆ ತಕ್ಕ ನಡವಳಿಕೆ'** ಗಳ ವಿವರವನ್ನು ಕಾಣಬಹುದಾಗಿದೆ.

ಸಿದ್ಧಮುನಿಯ ನಂತರ ಪೀಠಾರೋಹಣ ಮಾಡಿದ ಕರ್ಮನಾಥನು ಆಧ್ಯಾತ್ಮಿಕವಾದ ತೀವ್ರ ಪ್ರಜ್ಞೆಯುಳ್ಳವನಾಗಿದ್ದು, ಬ್ರಹ್ಮಜ್ಞಾನದಲ್ಲಿ ಆಸಕ್ತನಾಗಿದ್ದನೆಂಬುದನ್ನು ಆತನ ಬೋಧನೆಯಿಂದ ಊಹಿಸಬಹುದು:

**"ಅಲೆಗಳಿವೆ ಅಬ್ಧಿಯಲಿ ಮೇಲೆದ್ದು ಮುಳುಗುವುವು**
**ಅಂತೆಯೇ ಅಲೆಗಳೇ ಅಬ್ಧಿಯೆಲ್ಲ**
**ಅಲೆಯಂತೆ ಆತ್ಮಗಳು ಬೆರೆತಿಹುವು ಬ್ರಹ್ಮನಲಿ**
**ಆತ್ಮಗಳೆ ಅನಂತದ ಬ್ರಹ್ಮವೆಲ್ಲ"**

–ಇಲ್ಲಿ ಸಮುದ್ರದ ಅಲೆಗಳಿಗೂ, ಜಗತ್ತಿನ ಆತ್ಮಗಳಿಗೂ ಸಂಬಂಧ ಕಲ್ಪಿಸಲಾಗಿದೆ. ಸಮುದ್ರದಲ್ಲಿ ಅಲೆಗಳು ಮೇಲೆದ್ದು ಮುಳುಗಿದರೂ, ಸಮುದ್ರದೊಳಗೇ ಬೆರೆಯುವಂತೆ, ಜಗತ್ತಿನ ಆತ್ಮಗಳು ಬೇರೆ ಬೇರೆ ಎನಿಸಿದರೂ ಕೊನೆಗೆ ಅವೆಲ್ಲ ಬೆರೆಯುವುದು ಬ್ರಹ್ಮನಲ್ಲೇ ಎಂದು ಕವಿ ಊಹಿಸಿರುವುದು ಆತನ ಆಧ್ಯಾತ್ಮ ಪ್ರಜ್ಞೆಗೆ ಸಾಕ್ಷಿ! ಕವಿಯ **'ಪ್ರತಿಮಾ ಶಕ್ತಿ'** ಕೂಡ ಈ ಪದ್ಯದ ಧನಾತ್ಮಕ ಅಂಶವೆನಿಸಿದೆ.

ಬ್ರಹ್ಮನಾಥನ ಬೋಧನೆಯನ್ನು ವರ್ಣಿಸುತ್ತಾ ಕವಿ, ಹೀಗೆ ಹೇಳುತ್ತಾರೆ:

**"ಅಲೆಗಳಿವೆ ಅಬ್ಧಿಯಲಿ ಶಾಖವಿದೆ ಶಿಖಿಯಲ್ಲಿ**
**ಪರಿಮಳವು ಪುಷ್ಪದಲಿ, ಘೃತ ಹಾಲಲಿ**
**ಇಳೆಯಿಹುದು ಈಶನಲಿ ಶಿವನಿಹನು ಶಕ್ತಿಯಲಿ**
**ಅಡಗಿಹುದು ಅಜಾಂಡ ಶಿವಶಕ್ತಿಯಲಿ"**

ಇಡೀ ಬ್ರಹ್ಮಾಂಡವೇ ಶಿವನ ಶಕ್ತಿಯಲ್ಲಿ ಮಿಳಿತಗೊಂಡಿದೆ ಎಂಬುದನ್ನು ವರ್ಣಿಸುವಾಗ ಕವಿ ಕೆಲವು ನಿದರ್ಶನಗಳನ್ನು ಕೊಟ್ಟಿರುವುದು ಓದಲು ಆಸಕ್ತಿ ಪುಟಿಸುತ್ತದೆ. ಸಮುದ್ರದಲ್ಲಿ ಅಲೆಗಳಿರುವಂತೆ, ಶಿಖಿಯಲ್ಲಿ ಬಿಸಿಯಿರುವಂತೆ, ಪುಷ್ಪದಲಿ ಪರಿಮಳ ಸೇರಿರುವಂತೆ, ಹಾಲಿನಲ್ಲಿ ಬೆಣ್ಣೆ ಇರುವಂತೆ, ಇಡೀ ಭೂಲೋಕವೇ ಈಶನಲ್ಲಿ, ಆತನ ಶಕ್ತಿಯಲ್ಲಿ ಅಡಗಿ ಹೋಗಿದೆಯೆನ್ನುವ ಗ್ರಹಿಕೆ, ವಿಶ್ವಶಕ್ತಿಯ ಮೇಲೆ ಬೋಧಕನಿಗಿರುವ ಶ್ರದ್ಧೆ, ಭಕ್ತಿಗಳನ್ನು ಪರಿಚಯಿಸುತ್ತದೆ.

ಸೋಮನಾಥನ ಬೋಧನೆಯಲ್ಲಿ .ಕಂಡು ಬರುವ ವಿವಿಧ ಬಗೆಯ ಮಾತುಗಳ ಪರಿಣಾಮವನ್ನು ಕವಿ ಸೊಗಸಾದ ಪದ್ಯವೊಂದರಲ್ಲಿ ತೋರಿಸಿದ್ದಾರೆ:

**"ಸಟೆ ನುಡಿಯು ಸಿಡಿ ಮದ್ದು ಅಧಮ ನುಡಿ ಅಗ್ನಿ ಮುಡಿ**
**ನಿಂದನೆಯ ನುಡಿ ಸಿಡಿಲ ಹೊಡೆತದಂತೆ**
**ಕಠಿಣ ನುಡಿ ಕಾಡ್ಗಿಚ್ಚು ಚಾಡಿ ನುಡಿ ಚಿತೆಯ ಝಳ**
**ಬೈಗುಳವು ಬಡಬಾಗ್ನಿ ಕಿಡಿಗಳಂತೆ".**

– ಋಣಾತ್ಮಕ ಮಾತುಗಾರಿಕೆ ಮನುಷ್ಯ ಸಂಬಂಧಗಳಿಗೆ ಕೇಡುಂಟು ಮಾಡುತ್ತವೆ. ಅವು ಮನಸ್ಸಿಗೆ ಕೊಡುವ ಶಾಪ–ತಾಪಗಳು ಹೇಳಲಸಾಧ್ಯ! ಸುಳ್ಳಿನ ನುಡಿ ಸಿಡಿ ಮದ್ದಾದರೆ, ಅಧಮನ ಮಾತು ಬೆಂಕಿ, ನಿಂದನೆಯ ನುಡಿ ಸಿಡಿಲೆರಗಿದಂತೆನಿಸಿದರೆ ಕಠಿಣವಾದ ಮಾತು ಕಾಡ್ಗಿಚ್ಚಿಗೆ ಸಮಾನ. ಚಾಡಿ ಮಾತು ಚಿತೆಯ ಝಳವಾದರೆ ಬೈಗುಳ ಬಡಬಾಗ್ನಿ ಕಿಡಿ ಎಂದು ಕವಿ

ಹೇಳುವಾಗ, ಎಷ್ಟೆಲ್ಲ ಬಗೆಯಲ್ಲಿ ಜನ ಬೇರೆಯವರನ್ನು ಯಾವ ಯಾವ ಬಗೆಯಲ್ಲಿ ನೋಯಿಸುತ್ತಿರುತ್ತಾರೆನ್ನುವುದು ಅರ್ಥವಾಗುತ್ತದೆ.

ಭೌಮನಾಥನ ಬೋಧನೆಯಲ್ಲಿ ಜನನ–ಮರಣಗಳ ವಿಚಾರವನ್ನು ಕವಿ ಹೇಳುವಾಗ 'ಬೀಜ–ವೃಕ್ಷ ನ್ಯಾಯ' ತತ್ವವನ್ನು ಬಳಸಿಕೊಳ್ಳುತ್ತಾರೆ:

**"ಬತ್ತದಿಹ ಬೀಜದಿಂ ವೃಕ್ಷವೋ ವೃಕ್ಷದಿಂ**
**ಬೀಜವೋ ಭೇದಿಸೀ ಜಟಿಲೊಗಟನು**
**ಮಥಿಸುತ್ತ ಮರಣದಿಂ ಜನನವೋ ಜನನದಿಂ**
**ಮರಣವೋ ಮನುಜ ನೀ ತಿಳಿ ನಿಜವನು".**

'ಪುನರ್ಜನ್ಮ'ದ ಬಗ್ಗೆ ನಂಬಿಕೆಯಿರುವ ನಾಥ ಮುನಿ, ಜನನದಿಂದ ಮರಣವೋ? ಮರಣದಿಂದ ಜನನವೋ? ಗೊಂದಲಕ್ಕೀಡಾಗುತ್ತಾರೆ. ಇದು ಅವರಿಗೆ ಬಗೆಹರಿಯದ ಪ್ರಶ್ನೆಯಾಗಿದೆ. ಹೀಗಾಗಿ ಕವಿ ಈ ಪ್ರಶ್ನೆಯನ್ನು ಸಮರ್ಥಿಸಲು ಬೀಜದಿಂದ ವೃಕ್ಷವೋ? ವೃಕ್ಷದಿಂದ ಬೀಜವೋ ಎನ್ನುವ ಉತ್ತರ ಸಿಗದ ಪ್ರಶ್ನೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಸತ್ತವನಿಗೆ, ಮತ್ತೆ ಹುಟ್ಟುವ ಅವಕಾಶವಿದೆ ಎನ್ನುವ ನಂಬಿಕೆ ಇಲ್ಲಿ ಪ್ರಶ್ನಿಸಲ್ಪಟ್ಟಿದೆ.

ಸೌಮ್ಯ ಮುನಿಯ ಬೋಧನೆಯಲ್ಲಿ, ಹೆಸರಿಗೆ ತಕ್ಕಂತೆ ಸೌಮ್ಯ ಭಾವನೆಯೇ ತುಳುಕಾಡುವಂತೆ ಕವಿ ವರ್ಣಿಸುತ್ತಾರೆ:

**"ಅಜ್ಞಾನ ಆತ್ಮವದು ದುಃಖಕ್ಕೆ ದೂಡುವುದು**
**ಸುಜ್ಞಾನ ಸೆಳೆಯುವುದು ಮೋಕ್ಷದತ್ತ**
**ವಿಜ್ಞಾನ ವಿಜೃಂಭಿಸೆ ಅಧ್ಯಾತ್ಮ ಅರಿಯುತ್ತ**
**ಸಾಗುವೆವು ಶಾಂತಿಯಿಂ ದೈವದತ್ತ".**

– ಸೌಮ್ಯ ಮುನಿಯು ಈ ಮಾತು ಸತ್ಯಕ್ಕೆ ಹತ್ತಿರವಾದಂತದ್ದು, ಅಜ್ಞಾನವು ನಮ್ಮನ್ನು ದುಃಖಕ್ಕೆ, ಚಿಂತೆಗೆ ನೂಕಿದರೆ, ಸುಜ್ಞಾನ ಮೋಕ್ಷದತ್ತ ಸೆಳೆಯುತ್ತದೆ, ಅದರಲ್ಲೂ ವಿಜ್ಞಾನ ನಮ್ಮ ಮನಸ್ಸನ್ನಾಕ್ರಮಿಸಿದರೆ, ದೈವಿಕ ನೆಲೆಯನ್ನು ಪರಿಚಯಿಸುವ ಅಧ್ಯಾತ್ಮ ಕೂಡ ಕಠಿಣತೆ ತೊರೆದು ಹತ್ತಿರವಾಗುತ್ತದೆ. ಇದರ ಪರಿಣಾಮ ನಮ್ಮ ಮನಸ್ಸು ದೈವದತ್ತ ವಾಲುವುದರಿಂದ ಶಾಂತತೆ ಆವರಿಸಿಕೊಳ್ಳುತ್ತದೆನ್ನುವ ಸರಳ ಸತ್ಯವೊಂದನ್ನು ಈ ಮುನಿ ನಿಖರವಾಗಿ ಗುರುತಿಸಿದ್ದಾರೆ.

ಮಂದಮುನಿಯು ಆಸೆ, ಮತ್ಸರಗಳು ಎಷ್ಟು ಭೀಕರವೆನ್ನುವುದನ್ನು ಬೋಧಿಸಿದ ವಿಚಾರವನ್ನು ಕವಿ ಹನುಮೇಗೌಡರು ಹೀಗೆ ವರ್ಣಿಸಿದ್ದಾರೆ:

**"ಧನದಾಸೆ ಧರೆಯಾಸೆ ನಗದಾಸೆ ನೆಲೆಯಾಸೆ**
**ಫಲಿಸದಿರೆ ಪುಟ್ಟುವುದು ಮಾತ್ಸರ್ಯವು**
**ಮಾನಸದ ಮಡುವಿನಲಿ ಮಾತ್ಸರ್ಯ ಮಕರಗಳು**
**ಶಾಂತಿ ದಯೆ ಶಿಶುಗಳನು ಕಬಳಿಸುವುವು"**

ಹಣ-ಒಡವೆ ಮೇಲಿನ ಆಸೆ ಈಡೇರದಿದ್ದಾಗ, ಅವುಗಳಿರುವ ಇತರರನ್ನು ಕಂಡು ಮಾತ್ಸರ್ಯ ಪಡುತ್ತೇವೆ. ಈ ಮಾತ್ಸರ್ಯ ಒಮ್ಮೆ ಮನಸ್ಸಿನಲ್ಲಿ ಇಣುಕಿತೆಂದರೆ ಅಲ್ಲಿನ ಶಾಂತಿ ದಯೆಗಳನ್ನೇ ಇಲ್ಲದಂತೆ ಮಾಡಿಬಿಡುತ್ತದೆ ಎನ್ನುವುದನ್ನು **'ರೂಪಕ'** ಬಳಸಿ ವರ್ಣಿಸಿರುವುದು ಆಸಕ್ತಿದಾಯಕವೆನಿಸುತ್ತದೆ. ಮಾತ್ಸರ್ಯವನ್ನು **'ಮಕರ'**ವೆಂತಲೂ ಶಾಂತಿ ದಯೆಗಳನ್ನು **'ಶಿಶು'**ಗಳೆಂತಲೂ ಹೋಲಿಕೆ ಮಾಡಿರುವುದು ಸಮಂಜಸವೆನಿಸುತ್ತದೆ.

ತಮೋನಾಥನು ಹೇಳುವ ಐಹಿಕ ಸುಖ-ಭೋಗಗಳು ಉಂಟು ಮಾಡುವ ಕೆಡುಕನ್ನು ಕವಿ ವರ್ಣಿಸುವುದು ಹೀಗೆ:

> **"ಅವಿದ್ಯೆಯು ಆವರಿಸೆ ಸುಖ ಭೋಗ ಸವಿಯುತ್ತ**
> **ಕಾಮನೆಯ ಕೂಪದಲಿ ನರ ಮುಳುಗುವ**
> **ವಿವಶ ನರ ವೇಶ್ಯೆಯಲಿ ಸಂಭೋಗ ಸುಖ ಸವಿದು**
> **ಪ್ರಳಯದಾ ಪ್ರವಾಹದಿ ಮುಳುಗಿತಿರುವ"**

ವಿದ್ಯೆಯಿಲ್ಲದ ಮನುಷ್ಯ ಸದಾ ಸುಖಭೋಗಗಳತ್ತಲೇ ಯೋಚಿಸುತ್ತಾನೆ. ಅದರಲ್ಲೂ ಕಾಮ ಪಾಶದಲ್ಲಿ ಸಿಲುಕಿ ನರಳುತ್ತಾನೆ. ಕ್ಷಣಿಕ ಸುಖ ಅರಸಿ ಹೊರಟವ, ವೇಶ್ಯಾ ಸಂಗ ಮಾಡಿ ನಾನಾ ರೀತಿಯ ಸಂಕಟಗಳನ್ನು ತಂದುಕೊಳ್ಳುತ್ತಾನೆ. ಪ್ರಾಪಂಚಿಕ ವಸ್ತು ವಿಚಾರಗಳು "ಆರಂಭದಲ್ಲಿ ಸವಿ ತೋರಿ ತದನಂತರದಲ್ಲಿ ನಮ್ಮ ವಿರುದ್ಧವೇ ಮುಳಿದು ಕೊಲ್ಲುವ ಪ್ರಯತ್ನ ಮಾಡುತ್ತವೆ" ಎನ್ನುವ **ಪಂಪನ (ಆದಿಪುರಾಣ, ಭರತ-ಬಾಹುಬಲಿ ಯುದ್ಧ ಪ್ರಸಂಗ)** ಮಾತನ್ನು ಇಲ್ಲಿ ನೆನೆಸಿಕೊಳ್ಳಬಹುದು.

ವಜ್ರನಾಥಮುನಿ ಪಂಚೇಂದ್ರಿಯಗಳ ಅನುಭವಗಳು ಆತ್ಮಜ್ಞಾನಕ್ಕೆ ಹೇಗೆ ಅಡ್ಡಿಯುಂಟು ಮಾಡುತ್ತವೆ ಎಂಬುದನ್ನು ಕವಿ ಹೀಗೆ ವರ್ಣಿಸುತ್ತಾರೆ:

> **"ಕಸದಿಂದ ಕಲೆತಿರುವ ಜಲದಲ್ಲಿ ಜಳಪಿರದು**
> **ನೋಡನ್ನೈ ನರನು ಆ ಜಲದಿ ಬಿಂಬ**
> **ರಸ ಶಬ್ಧ ರೂಪ ಗಂಧ ಸ್ಪರ್ಶ ದುರ್ಬುದ್ಧಿ**
> **ಕಲುಶ ಮನ ಕಾಣದೈ ಆತ್ಮ ಬಿಂಬ"**

ಕೊಳಕಾದ ನೀರಿನಲ್ಲಿ ಹೇಗೆ ನಮ್ಮ ಪ್ರತಿಬಿಂಬ ಕಾಣಲು ಸಾಧ್ಯವಿಲ್ಲವೋ, ಹಾಗೆಯೇ ಕಣ್ಣು-ಕಿವಿ-ಮೂಗು-ನಾಲಿಗೆ ಮತ್ತು ಚರ್ಮಗಳೆಂಬ ಪಂಚೇಂದ್ರಿಯಗಳು ನೀಡುವ ರೂಪ-ಶಬ್ಧ-ರಸ-ಗಂಧ-ಸ್ಪರ್ಶದ ಅನುಭವಗಳು ನಮ್ಮ ಮನಸ್ಸಿನಲ್ಲಿ ಅವರಿಸಿಕೊಂಡಿರುವುದರಿಂದ ನಮ್ಮನ್ನು ನಾವು ಅರಿತುಕೊಳ್ಳಲು ಸಾಧ್ಯವಾಗುತ್ತಿಲ್ಲ ಎನ್ನುವುದು ವಜ್ರಮುನಿಯ ಸಂದೇಶವಾಗಿದೆ.

ನಿರುತಿನಾಥನು ಆತ್ಮ ಜ್ಞಾನವರಿಯದ ಮನುಷ್ಯ ಹೇಗೆ ನರಳುತ್ತಿದ್ದಾನೆನ್ನುವುದನ್ನು ಬೋಧನೆ ಮಾಡಿರುವುದನ್ನು ಕವಿ ಬಣ್ಣಿಸುವುದು ಹೀಗೆ:

**"ನೀರ್ಮೇಲೆ ನಾವೆ ತಾ ತೇಲುತ್ತ ತೆರಳುವುದು**
**ನಾವೆಯಲಿ ನೀರ್ಸೇರೆ ಮುಳುಗುವುದದು**
**ನರನಾತ್ಮ ನದಿರೂಪ ತಮಂಧದಿ ತೇಲುತಿದೆ**
**ತಮವು ಆತ್ಮದಿ ಸೇರೆ ನರಳುವುದದು"**

– ನೀರಿನ ಮೇಲೆ ದೋಣಿಯೊಂದು ಸಾಗುವಾಗ, ನೀರು ದೋಣಿಯೊಳಗೆ ಸೇರಿದರೆ ದೋಣಿ ಮುಳುಗಬೇಕಾಗುತ್ತದೆ. ಅದೇ ರೀತಿಯಲ್ಲಿ ಮನುಷ್ಯನ ಆತ್ಮ ನದಿಯ ರೂಪದಲ್ಲಿರುವ ಕತ್ತಲೆಯಲ್ಲಿ ತೇಲುತ್ತಿದೆ; ಕತ್ತಲೆಯು ಆತ್ಮದೊಳಗೆ ಸೇರಿ ಬಿಟ್ಟರೆ ಮನುಷ್ಯ ವೃಥಾ ನರಳಬೇಕಾಗುತ್ತದೆನ್ನುವುದು ಮುನಿಯ ಅಭಿಪ್ರಾಯ.

ಸಿಂಧುನಾಥರ ಬೋಧನೆಯೊಂದು ಮರುಜನ್ಮವನ್ನು, ಹಾವು ಪೊರೆ ಕಳಚುವ ಕ್ರಿಯೆಗೆ ಹೋಲಿಕೆ ಮಾಡಿ ವರ್ಣಿಸಿರುವುದು ಕವಿಯ ವಿಶಿಷ್ಟ ಕಲ್ಪನೆಗೆ ಸಾಕ್ಷಿ.

**"ಪೊರೆಯನ್ನು ಪಾವು ತಾ ಬಿಟ್ಟು ಹೊರ ಬಂದು ಹೊಸ**
**ತನವನ್ನು ತಳೆಯುವುದು ಹರ್ಷದಿಂದ**
**ತೊರೆಯುತ್ತ ತನುವನ್ನು ಜೀವಾತ್ಮ ಜನ್ಮ ಮರು**
**ತಾಳುವುದು ತಾ ತನ್ನ ಕರ್ಮದಿಂದ".**

ಶರೀರ ಮತ್ತು ಆತ್ಮ ಖಂಡಿತಾ ವಿಭಿನ್ನವಾದವುಗಳು. ಶರೀರ ಕಣ್ಣಿಗೆ ಕಂಡರೆ, ಆತ್ಮ ಕಾಣದು. ಮನುಷ್ಯ ಸತ್ತಾಗ ಆತ್ಮ ಆ ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಪ್ರವೇಶ ಮಾಡುತ್ತದೆ ಎನ್ನುವುದು ಹಾವಿನ ಪೊರೆ ಕಳಚುವ ಕ್ರಿಯೆಗೆ ಕವಿ ಹೋಲಿಸಿದ್ದಾರೆ. ಹಾವು ಪೊರೆ ಕಳಚುವುದು ಹೇಗೆ ಪ್ರಕೃತಿ ನಿಯಮವೋ ಹಾಗೆಯೇ ಆತ್ಮ, ಶರೀರದ ಪೊರೆ ಕಳಚಿಕೊಳ್ಳುವುದು ಕೂಡ ಪ್ರಕೃತಿ ನಿಯಮವೇ ಎನ್ನುವ ಸತ್ಯ ಇದರಿಂದ ತಿಳಿಯುತ್ತದೆ.

ಪವನನಾಥರು ಮನುಷ್ಯನ ಮರಣವು **'ವಿಧಿ ಕೊಡುವ ವಿಧಾನ'**ವೆಂದು ವರ್ಣಿಸಿದ್ದಾರೆ. ಅದು ಬರವಣಿಗೆಯ ವಿಧಾನದಂತೆಯೇ **'ನಿಯಮ'** ಪಾಲಿಕೆಗಾಗಿ ಬಂದಿರುವಂಥದ್ದೆಂದು ಕವಿ ಹನುಮೇಗೌಡರು ಬಹು ಸೊಗಸಾಗಿ ವರ್ಣಿಸಿದ್ದಾರೆ:

**"ವಿರಾಮವ ವಾಕ್ಯಗಳ ಕಡೆಯಲ್ಲಿ ಕೊಡುವರೈ**
**ವಾಕ್ಯ ಮೇಣ್ ವಿರಾಮು ಬರಹ ವಿಧಾನ**
**ಮರಣವೈ ಮನುಜನಿಗೆ ವಿಧಿಕೊಡುವ ವಿರಾಮವು**
**ಮರು ಜನನ ಮರಣವೂ ವಿಧಿ ವಿಧಾನ"**

– ಬರವಣಿಗೆಯಲ್ಲಿ ವಾಕ್ಯದ ಕೊನೆಯಲ್ಲಿ ವಿರಾಮ ಹಾಕುವುದು ನಿಯಮ. ಇದು ಬರಹ ವಿಧಾನ. ಹಾಗೆಯೇ ಮನುಷ್ಯ ಬದುಕಿಗೆ ಮರಣವೇ ವಿರಾಮ ಚಿನ್ಹೆ. ಮರು ಜನನವಾದರೂ ಮತ್ತೆ ಮರಣದ ನಿಯಮಕ್ಕೆ ಒಳಗಾಗಲೇ ಬೇಕಾದ ವಾಸ್ತವವನ್ನು ಕವಿ ಸೊಗಸಾಗಿ ವರ್ಣಿಸಿದ್ದಾರೆ.

ಕುಬೇರನಾಥರ ಬೋಧನೆಯಲ್ಲಿ ಸುಖ-ದುಃಖ ಮಿಳಿತ ಸಂಸಾರ ಶಾಶ್ವತ; ಇದು ಇಲ್ಲಿ ಸಾಮಾನ್ಯ. ಇದನ್ನರಿಯದ ಮನುಷ್ಯ ಸುಖ-ದುಃಖ ಕಂಡಾಗ ಅವುಗಳಿಗೆ ತ್ರೀವ್ರ ಸ್ಪಂದಿಸಿ ಅಹಂ ಮತ್ತು ಖಿನ್ನತೆಗೆ ಈಡಾಗುತ್ತಾನೆ. ಇದನ್ನು ಕವಿ ವರ್ಣಿಸುವುದು ಹೇಗೆಂದರೆ:

**"ಫಲಂಗಳು ಪತ್ರಗಳು ಹೊಮ್ಮುವುವು ಹುದುಗುವುವು**
**ಆಶ್ರಯದ ಅಶ್ವತ್ಥ ತರು ಶಾಶ್ವತ**
**ಜಲಭುವಿಯ ಜೀವಿಗಳು ಉದ್ಭವಿಸಿ ಉಡುಗುವುವು**
**ಸುಖ-ದುಃಖ ಸಂಸಾರ ತರು ಶಾಶ್ವತ"**

-ಶಾಶ್ವತವಾಗಿರುವ ಅಶ್ವತ್ಥ ಮರದಲ್ಲಿ ಎಲೆ ಮತ್ತು ಹಣ್ಣುಗಳೂ ಒಮ್ಮೆ ನಳನಳಿಸಿ ನಕ್ಕರೆ, ಮತ್ತೊಮ್ಮೆ ಒಣಗಿ ಬಾಡಿಹೋಗುತ್ತವೆ. ಆದರೆ ಅಶ್ವತ್ಥ ವೃಕ್ಷ ಮಾತ್ರ ಯಾವುದೇ ಬದಲಾವಣೆ ತೋರದೆ ಸುಮ್ಮನಿರುತ್ತದೆ. ಹಾಗೆಯೇ ಭೂಮಿ ಮತ್ತು ನೀರಿನ ಜೀವಿಗಳು ಹುಟ್ಟಿ, ಕೆಲವು ದಿನ ಜೀವಿಸಿ, ನಾಶ ಹೊಂದಿಬಿಡುತ್ತವೆ. ಆದರೆ ಆ ಜೀವಿಗಳು ಜೀವಿಸುವ ಸಂಸಾರದಲ್ಲಿನ ಕಷ್ಟ ಸುಖಗಳು ಮಾತ್ರ ಶಾಶ್ವತವಾಗಿರುತ್ತವೆ. ಅದು ಎಲ್ಲರೂ ಅನುಭವಿಸಲೇ ಬೇಕಾದಂಥ ಅನುಭವಗಳೆಂದು ಕವಿ ತಿಳಿಸಿದ್ದಾರೆ.

ಸತ್ಯಮುನಿ ಜ್ಞಾನವನ್ನು ಬೆಳಕಿಗೆ ಹೋಲಿಸಿ, ಜ್ಞಾನದಿಂದ ಜಗವೆಲ್ಲ ಬೆಳಗಲು ಸಾಧ್ಯವೆಂದು ಹೇಳುತ್ತಾರೆ:

**"ಹಣತೆಯಿಂ ಹಚ್ಚಿದರೆ ಹಲವಾರು ಹಣತೆಗಳ**
**ಜ್ಯೋತಿಯಿಂ ಜಗಮಿಪುದು ಗೃಹವೆಲ್ಲವು**
**ಜನರುಗಳ ಜಾಗೃತಿಸೆ ಕಲಿತವರು ಕಲಿಸಲೈ**
**ಜ್ಞಾನದಿಂ ಜ್ವಲಿಸಲೈ ಧರೆಯೆಲ್ಲವು"**

ದೀಪವೊಂದರಿಂದ ಹಲವು ಹಣತೆಗಳನ್ನು ಹಚ್ಚಿದಾಗ ಇಡೀ ಮನೆಯೇ ಬೆಳಕಿನಿಂದ ಬೆಳಗಲು ಸಾಧ್ಯ. ಹಾಗೆಯೇ ವಿದ್ಯೆ-ಜ್ಞಾನಗಳು ಬೆಳಕಿಗೆ ಸಮಾನ. ಜ್ಞಾನವಿರುವಂಥವರು, ಇಲ್ಲದಿರುವವರಿಗೆ ಕಲಿಸಿದರೆ ಇಡೀ ಧರೆಯೇ ಬೆಳಕಿನಿಂದ ಜ್ವಲಿಸಲು ಅವಕಾಶವಾಗುತ್ತದೆಯೆಂಬುದು ಸತ್ಯಮುನಿಯ ಭಾವನೆಯಾಗಿದೆ.

ವಿರೂಪಾಕ್ಷನಾಥರ ಸಿದ್ಧಾಂತವಾದ ಬ್ರಹ್ಮನ ಸೃಷ್ಟಿಯಿಂದ ಈ ಜಗತ್ತು ಹೇಗೆ ಬ್ರಹ್ಮನಿಂದಲೇ ಕಬಳಿಸಲ್ಪಡುತ್ತದೆ ಎನ್ನುವುದನ್ನು 'ಜೇಡರ ಹುಳು'ವಿನ ಪ್ರತಿಮೆ ಬಳಸಿ ಕವಿ ಬಣ್ಣಿಸುವುದು ಹೀಗೆ:

**"ಜಿಹ್ವೆಯಿಂ ಜೇಡ ತಾ ಬೀಸುವುದು ಬಲೆಯನ್ನು**
**ಮುದದಿ ತಾ ಮರಳಿಯದ ಸೆಳೆಯುತಿಹುದು**
**ಬ್ರಹ್ಮ ತಾ ಬೊಮ್ಮಾಂಡ ಸೃಜಿಸಿಹನು ಸ್ವೇಚ್ಛೆಯಿಂ**
**ಸೆಳೆಯಲದ ಸೇರುವುದವನುದರವದು"**

ಜೇಡರ ಹುಳುವು ಬೇಟೆ ಹಿಡಿಯಲು ತನ್ನ ಉಗುಳನ್ನೇ ಬಳಸಿಕೊಂಡು, ಬೇಟೆಯೊಡನೆ ಆ ಉಗುಳನ್ನೇ ನುಂಗಿಕೊಳ್ಳುವುದುಂಟು. ಹಾಗೆಯೇ ಬ್ರಹ್ಮ ಈ ಲೋಕವನ್ನು ತನಗಿಷ್ಟ ಬಂದಂತೆ ಸೃಷ್ಟಿಸಿ, ತಾನೇ ಕಾಲ ಬಂದಾಗ ಸೆಳೆದುಕೊಳ್ಳುವನು. ಜೇಡರ ಹುಳು ಮತ್ತು ಬ್ರಹ್ಮ ಇಬ್ಬರ ಕೆಲಸದ ಸ್ವರೂಪ ಬೇರೆ ಬೇರೆಯಾದರೂ ಅಂತಿಮ ಗುರಿ ಒಂದೇ ಎನ್ನುವುದು ವಿರೂಪಾಕ್ಷರ ಅಭಿಪ್ರಾಯ.

ರಾಮನಾಥ ಮುನಿಯು ಮಾತಿನ ಮಹತ್ವವನ್ನು ಕುರಿತಂತೆ ಏನು ಹೇಳಿದ್ದಾರೆಂಬುದನ್ನು ಕವಿ ಸಿ. ಹನುಮೇಗೌಡರು ಚಿತ್ರಿಸುವುದು ಹೀಗೆ:

**"ಮೃದು ಮಾತು ಮಾಣಿಕ್ಯ, ಕಟು ಮಾತು ಕಡು ನಂಜು**
**ಮಾತು ಸುಮ ಮಾಲೆ ಮೇಣ್ ಕರವಾಲವು**
**ಮೃದು ಮಾತು ಮಿತ್ರಗಣ ಸೇಡು ನುಡಿ ಶತ್ರುಗಣ**
**ಸೊಟ್ಟ ನುಡಿ ಶಾಪ ಮೇಣ್ ಅದು ಮೃತ್ಯುವು"**

ಮೆದು ಮಾತು ಮಾಣಿಕ್ಯಕ್ಕೆ ಸಮಾನ; ಕಟುವಾದ ಮಾತು ವಿಷಕ್ಕೆ ಸಮಾನ. ಮಾತೆನ್ನುವುದು ಒಮ್ಮೊಮ್ಮೆ ಹೂವಿನ ಮಾಲೆಯಂತೆಯೂ, ಕತ್ತಿಯ ಹೊಡೆತದಂತೆಯೂ ಕೆಲಸ ಮಾಡಬಲ್ಲದು. ಮೃದು ಮಾತು ಮಿತ್ರರ ಸಂಖ್ಯೆ ಹೆಚ್ಚಿಸಿದರೆ, ಸೇಡಿನ ನುಡಿ ಶತೃಗಳ ಸಂಖ್ಯೆ ಹೆಚ್ಚಿಸುತ್ತದೆ. ಅಣಕು ಮಾತು ಶಾಪವಾಗಿ ಕಾಡುತ್ತದೆಂದೂ, ಕೆಲವೊಮ್ಮೆ ಮಾತೇ ಮೃತ್ಯು ಕೂಪವಾಗುವುದೂ ಉಂಟೆಂದು ಶ್ರೀಯುತರು ಎಚ್ಚರಿಸಿದ್ದಾರೆ.

ಭಜನಮುನಿನಾಥರು ಆತ್ಮ ಹೇಗೆ ದೇಹದಿಂದ ದೇಹಕ್ಕೆ ಬದಲಾಯಿಸುತ್ತದೆಂಬುದನ್ನು ಹಾವಿನ ಹೋಲಿಕೆಯಲ್ಲಿ ವಿವರಿಸಿದ್ದಾರೆ:

**"ಹಾವಿರುವ ಹುತ್ತವನು ಬಡಿದಲ್ಲಿ ಬರದು ಫಣಿ**
**ಕೋವೆಯಿಂ ಕೋವೆಗದು ಧಾವಿಸುವುದು**
**ಅವಿತಿರುವ ಆತ್ಮ ತಾ ತನುವಿನಲಿ ತಾ ಹುದುಗಿ**
**ತನು ತೊರೆದು ತನು ಪಡೆದು ತೆರಳುತಿಹುದು"**

–ದೇಹ ನಶ್ವರ; ಆತ್ಮ ಶಾಶ್ವತ. ದೇಹ ಅಳಿಯುವವರೆಗೂ ಆತ್ಮ ಅದರಲ್ಲಿದ್ದು, ದೇಹ ನಾಶವಾದ ನಂತರ ಅತ್ಮ ಅಲ್ಲಿಂದ ಹೊರಟು, ಬೇರೊಂದು ದೇಹ ಪ್ರವೇಶ ಮಾಡುತ್ತದೆ ಎನ್ನುವ ಆಧ್ಯಾತ್ಮಿಕ ನಂಬಿಕೆಯನ್ನು ಸಮರ್ಥಿಸಲು ಕವಿ ಹಾವಿನ ಪ್ರತಿಮೆ ಬಳಸಿಕೊಂಡಿದ್ದಾರೆ. ಹುತ್ತವನು ಬಡಿಯಲು ಯತ್ನಿಸಿದಾಗ ಹಾವು ಹೇಗೆ ಕೋವೆಯಿಂದ ಕೋವೆಗೆ ಪ್ರವೇಶ ಮಾಡುತ್ತದೋ ಹಾಗೆ ಆತ್ಮವೂ ಕೂಡ ಹಲವು ದೇಹಗಳ ಪ್ರವೇಶ ಮಾಡುತ್ತಲೇ ಇರುತ್ತದೆನ್ನುವುದನ್ನು ಕವಿ ಬಹು ಸ್ವಾರಸ್ಯಕರವಾಗಿ ತಿಳಿಸಿದ್ದಾರೆ.

ಶಿವನಾಥನೆಂಬ ಮುನಿಯು ಅರಿಷಡ್ವರ್ಗಗಳು ಮನುಷ್ಯನ ಉನ್ನತಿಗೆ ಹೇಗೆ ತೊಡರುಗಳಾಗಿವೆ ಎಂದು ವರ್ಣಿಸಿರುವುದನ್ನು ಕವಿ ಬಣ್ಣಿಸುವುದು ಹೀಗೆ:

**"ಬೆಟ್ಟದಿಂ ಬಂಡೆಯನು ತಳ್ಳಿದೊಡೆ ತಲುಪುವುದು**
**ಬಡ ಬಡನೆ ಬೀಳುತ್ತ ನಗದ ಬುಡವ**
**ಬೆಟ್ಟದಾ ಬುಡದಿಂದ ಭಾರವಿಹ ಬಂಡೆಯನು**
**ಶಿಖರಕ್ಕೆ ಸಾಗಿಸುವುದತಿಸುಲಭವ".**

–ಕ್ರೋಧ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳು ಬೆಟ್ಟದ ತುದಿಯಲ್ಲಿ ನಿಂತ ವ್ಯಕ್ತಿಯನ್ನು ಸುಲಭವಾಗಿ ಕೆಳಗೆ ದೂಡಿ ಬಿಡುತ್ತವೆ. ಆದರೆ ಬೆಟ್ಟದ ಬುಡದಲ್ಲಿರುವ ವ್ಯಕ್ತಿ ಮತ್ತೆ ತುದಿ ತಲುಪಬೇಕಾದರೆ ಈ ಅರಿಷಡ್ವರ್ಗಗಳು ಬಿಡುವುದಿಲ್ಲ. ಪದೇ ಪದೇ ಅಡ್ಡಿಯುಂಟು ಮಾಡಿಬಿಡುತ್ತವೆ ಎಂದು ಕವಿ ಬಣ್ಣಿಸುತ್ತಾರೆ.

ಭೈರವನಾಥನೆಂಬ ಮುನಿ, ಆಸೆ – ಆಮಿಷಗಳು ಹೇಗೆ ಮನುಷ್ಯನ ಸುತ್ತ ಸುತ್ತುವರಿದಿವೆ ಎನ್ನುವುದನ್ನು ವರ್ಣಿಸುತ್ತಾರೆ:

**"ರೇಷ್ಮೆ ಹುಳು ರೇಷ್ಮೆಯಾ ನೂಲಿನಿಂ ನೇಯುತ್ತ**
**ಆಗುವುದು ಅದು ಬಂಧಿ ಗೂಡಿನಲ್ಲಿ**
**ಆಸೆ ಮೇಣ್ ಆಮಿಷದ ಕುಟಿಲತೆಯ ಕರ್ಮಗಳ**
**ಬಲೆಯಲ್ಲಿ ಬಿದ್ದ ನರ ಮರ್ತ್ಯದಲ್ಲಿ"**

– ರೇಷ್ಮೆ ಹುಳು ತನ್ನ ದೇಹದಿಂದ ಒಸರಿದ ನೂಲನ್ನೇ ಸುತ್ತಿಕೊಂಡು ಗೂಡು ಮಾಡಿಕೊಂಡು ಬಂಧಿಸಲ್ಪಡುತ್ತದೆ; ಹಾಗೆಯೇ ಮನುಷ್ಯ, ಆಸೆ–ಆಮಿಷಗಳಿಗೆ ಸೋತು ಅವುಗಳ ಬಲೆಗೆ ಬಿದ್ದು ಬಂಧಿಯಾಗುತ್ತಾನೆಂದು ಭೈರವರು ನುಡಿದಿದ್ದಾರೆಂದು ಕವಿ ಭಾವಿಸುತ್ತಾರೆ.

೭೧ನೇ ಮಠಾಧೀಶರಾದ ಶ್ರೀಬಾಲಗಂಗಾಧರರು **'ಕರ್ತವ್ಯ ಪ್ರಜ್ಞೆ'** ಕುರಿತು ಹೀಗೆ ಬೋಧನೆ ಮಾಡಿದ್ದಾರೆ:

**"ದುಡಿಮೆಯೇ ಧನಲಕ್ಷ್ಮಿ ಕಾಯಕವೇ ಕೈಲಾಸ**
**ದೇಹವಿದು ದೇವನಿಹ ದೇವತಾಣ**
**ದುಡಿಯದೆಯೆ ದೈವವನು ನಿಂದಿಪುದು ನಿಕೃತಿಯೈ**
**ದುಡಿಮೆ ಫಲ ದೊರಕುವುದು ಸತ್ಯ ಕಣಾ"**

–ಪ್ರತಿಯೊಬ್ಬ ವ್ಯಕ್ತಿಯೂ ದುಡಿದು ತಿನ್ನಬೇಕು; ದುಡಿಮೆಯೇ ಹಣ ಕೊಡುವ ಲಕ್ಷ್ಮಿ; ಕಾಯಕ ಶಿವನ ಕೈಲಾಸಕ್ಕೆ ಸಮ. ಈ ದೇಹದಲ್ಲಿ ದೇವರ ಅಂಶ ಅಡಕವಾಗಿದೆ. ಕಾಯಕವೆನ್ನುವುದು ದೈವ ನಿಯಮವಾಗಿರುವುದರಿಂದ ದುಡಿಯದೆಯೆ ಸೋಮಾರಿಗಳಾಗಿ ಕಾಲ ಹಾಕುತ್ತಾ, ದೇವರನ್ನು ನಿಂದಿಸುವುದು ಅಪರಾಧವೆನಿಸುತ್ತದೆ. ಪ್ರತೀ ದುಡಿಮೆಯೂ ತಕ್ಕ ಫಲವನ್ನು ನೀಡಿಯೇ ನೀಡುತ್ತದೆಂದು ಬಾಲಗಂಗಾಧರರು ಹೇಳಿದ ಬೋಧನೆಯನ್ನು ಕವಿ ಹನುಮೇಗೌಡರು ಬಹು ಸೊಗಸಾಗಿ ವರ್ಣಿಸಿದ್ದಾರೆ.

–ಚುಂಚಾದ್ರಿ ಚಂದ್ರಿಕೆಯ ದ್ವಿತೀಯ ಸಂಪುಟವನ್ನು ಮಹಾತ್ಮರುಗಳ ಬೋಧನೆಯನ್ನು ವರ್ಣಿಸುವುದಕ್ಕಾಗಿಯೇ ಕವಿ ಮೀಸಲಿಟ್ಟಿದ್ದಾರೆ. ಇಡೀ ಕಾವ್ಯದ ಮುಖ್ಯ ಮಜಲುಗಳಲ್ಲಿ ನಾಥ ಮುನಿಗಳ ನಾಥೋಪದೇಶವೂ ಒಂದು. ಇಲ್ಲಿನ ಬೋಧನೆಯು ನಾಥ ಪಂಥದ ಸ್ಪಷ್ಟ ನಿಲುವನ್ನು ಪ್ರತಿಬಿಂಬಿಸುತ್ತದೆ. ಬೋಧನೆ ಹೆಚ್ಚು ಸರಳವಾಗಿ, ಜನ ಸಮ್ಮುಖವಾಗಿ ನಡೆದದ್ದರಿಂದಲೇ ನಾಥ

ಪಂಥ ಜನಪ್ರಿಯವಾಗಲು ಕಾರಣವಾಗಿದೆ. ಜನರನ್ನು ಸಾತ್ವಿಕ ಬದುಕಿನೆಡೆಗೆ ಆಕರ್ಷಿಸುವುದು ಅವರ ಗುರಿಯಾಗಿತ್ತು. ತಪ್ಪಿಯೂ ಕೂಡ ಅನ್ಯ ಧರ್ಮವನ್ನು, ಅನ್ಯ ಧರ್ಮಿಯರನ್ನು ನಿಂದಿಸದೆ ಆದರ್ಶ ಬದುಕಿನ ಕಡೆಗೆ ಜನರನ್ನು ಸೆಳೆಯುವುದು ಮುಖ್ಯ ಉದ್ದೇಶವಾಗಿತ್ತು. ಲೌಕಿಕ ಜೀವನವೇ ಅಂತಿಮವೆಂದು ಭಾವಿಸಿರುವ ಜನತೆಗೆ, ಅದು ಕೇವಲ ಭ್ರಮೆಯೆಂದು ತಿದ್ದಿ, ಆಧ್ಯಾತ್ಮಿಕ ಜೀವನದ ಅಳವಡಿಕೆಗೆ ಶ್ರಮಿಸಿರೆಂದು ನಾಥ ಮುನಿಗಳು ಒತ್ತಾಯಿಸಿದ್ದಾರೆ. ಪ್ರೊ.ಡಿ.ಲಿಂಗಯ್ಯನವರು ಮುನ್ನುಡಿಯಲ್ಲಿ ಹೇಳಿರುವಂತೆ **"ಬ್ರಹ್ಮೋಪದೇಶ, ಪ್ರಕೃತಿ ರಹಸ್ಯ, ಜೀವನ ಧರ್ಮ, ಶಿವ ಮಹಿಮೆ, ಮನುಷ್ಯ ಸ್ವಭಾವ, ನೈತಿಕತೆ, ಆಸ್ತಿಕತೆ, ಸನ್ನಡತೆ, ಸಹಕಾರ ತತ್ವ, ವೇದ ಮಹತ್ವ, ದರ್ಶನ ವಿಚಾರ, ಅನಾಥರ ಅಶಕ್ತರ ಉದ್ಧಾರ, ಮೃತ್ಯು ಅನಿವಾರ್ಯತೆ, ಗುರು ಮಹತ್ವ, ಉಪನಿಷತ್ ಸಾರ, ಶಾಂತಿ, ಅತ್ಮ ತತ್ವ, ವಿಶ್ವ ವಿಧಿಯಾಟ, ತಪಸ್ಸು, ತಮೋಗುಣ ನಿವಾರಣೆ, ಸತ್ಯ ಶಿವ ಸುಂದರ, ಮೋಕ್ಷ, ಆತ್ಮ ಸಾಕ್ಷಾತ್ಕಾರ, ಬ್ರಹ್ಮ ಸಾಕ್ಷಾತ್ಕಾರ, ಜೀವಾತ್ಮ-ಜಗದಾತ್ಮ ಸಂಬಂಧ, ಗುರು ಸೇವೆ, ಪರಹಿಂಸೆ ವರ್ಜನ್ಯ, ಪುನರ್ಜನ್ಮ, ಕರ್ಮ ನಿವಾರಣೆ, ಅಜ್ಞಾನ ನಾಶ, ದಾನ ಮಹತ್ವ, ಸತ್ಯ ದಯೆ ಅಗತ್ಯ, ಪರಸೇವೆ ಪುಣ್ಯಕರ, ವಿಶ್ವಾತ್ಮ ವೈಭವ, ಭಕ್ತಿಯ ಅಗತ್ಯ, ಶಮೆ ದಯೆ ಸದ್ಗತಿಗೆ ಸೋಪಾನ, ಭೂಮದಲ್ಲಿ ಬಿಂದು ಮಾನವ, ಸಕಲ ಸೃಷ್ಟಿಯಾತ್ಮ ಒಂದೆ, ಶ್ರಮದಿಂದ ಸುಖ, ಕರುಣೆ, ಕರ್ಮ ಫಲ, ಮಾತೃ ಗೌರವ, ಸತ್ಯ ಪಥ, ಸೇವೆ, ದೇವರು, ಭಕ್ತರ ರಕ್ಷಕ, ಭೈರವನ ಮಹಿಮೆ, ಚಿತ್ತ ಶುದ್ಧಿ, ಚಿತ್ತ ಚಾಂಚಲ್ಯ, ಯೋಗ, ಸತ್ಪಥ"** - ಈ ಎಲ್ಲ ವಿಚಾರಗಳಿಗೆ ಸಂಬಂಧಪಟ್ಟ ಮಠಾಧಿಪತಿಗಳ ಅಭಿಪ್ರಾಯಗಳನ್ನು ಕವಿ ಇಲ್ಲಿ ಸಂಕಲನ ಮಾಡಿದ್ದಾರೆ.

-ನಾಥ ಮುನಿಗಳ ಉಪದೇಶಗಳಲ್ಲಿ ಎದ್ದು ಕಾಣುವುದು, **'ಆತ್ಮ ವಿಚಾರ'**. **"ದೇಹಕ್ಕಿಂತ ಆತ್ಮವೇ ಮುಖ್ಯ; ದೇಹಕ್ಕೆ ಸಾವಿರುತ್ತದೆ; ಆದರೆ ಆತ್ಮಕ್ಕೆ ಸಾವಿಲ್ಲ. ಮನುಷ್ಯ ಸತ್ತ ನಂತರ ಆತನ ದೇಹದಲ್ಲಿರುವ ಆತ್ಮ ಬೇರೊಂದು ದೇಹವನ್ನು ಪ್ರವೇಶ ಮಾಡುತ್ತದೆ. ಹೀಗಾಗಿ ಆತ್ಮ ಚಿರಾಯು; ಕಣ್ಣಿಗೆ ಕಾಣಲಾರದಂಥದ್ದು"** - ಹೀಗೆಲ್ಲ ನಾಥ ಪಂಥೀಯರು ತಮ್ಮ ಬೋಧನೆಗಳಲ್ಲಿ ತಕ್ಕ ಸಾಮರ್ಥ್ಯಗಳನ್ನು ನೀಡಿ ತರ್ಕ ಸರಣಿ ಬೆಳೆಸುತ್ತಾರೆ. ಆದರೆ ಆತ್ಮದ ಅಸ್ತಿತ್ವದ ಬಗ್ಗೆ ಇದಮಿತ್ಥಂ ಎಂದು ಹೇಳಲು ಆಗುತ್ತಿಲ್ಲ. ವಿಜ್ಞಾನ ಕಣ್ಣಿಗೆ ಕಾಣುವುದನ್ನೇ ಒಪ್ಪುವುದರಿಂದ, ಆತ್ಮದ ಇರುವಿಕೆ ಬಗ್ಗೆ ಕೇವಲ ನಂಬಿಕೆಯನ್ನಷ್ಟೇ ನಾವು ನಿಜವೆಂದು ಭಾವಿಸಬೇಕಾಗಿದೆ! ಮನುಷ್ಯ ಸತ್ತ ನಂತರ ಅಪಾರ ನೋವು-ಚಿಂತೆಗಳನ್ನು ತನ್ನ ಬಂಧು ಬಾಂಧವರಿಗೆ ಬಿಟ್ಟು ಹೋಗುವುದರಿಂದ, ಅವರ ಮನಸ್ಸಿಗೊಂದಷ್ಟು ಸಾಂತ್ವನ ಸಿಗಲಿ ಎನ್ನುವ ಕಾರಣಕ್ಕಾಗಿ ಅತ್ಮದ ಪ್ರಸ್ತಾಪ ಮಾಡಿರಬಹುದೇನೋ ಎನಿಸುತ್ತದೆ. ಈ ರೀತಿಯ ನಂಬಿಕೆಗಳು ನಮ್ಮಲ್ಲಿ ಪಾರಂಪರಿಕವಾಗಿ ಬೇರು ಬಿಟ್ಟಿರುವುದರಿಂದ, ಸಾಧು-ಸಂತರು ಇಂಥ ವಿಚಾರಗಳನ್ನು ಗಾಢವಾಗಿ ನಂಬಿರುವುದರಿಂದ, ಕವಿ ಹನುಮೇಗೌಡರು ಅನಿವಾರ್ಯವಾಗಿ ತಮ್ಮ ಕಾವ್ಯದಲ್ಲಿ ಬಳಸಿಕೊಳ್ಳಬೇಕಾಗಿದೆ. **'ಆತ್ಮ'** ಕುರಿತಾದ ವಿವರಗಳು ನಾಥೋಪದೇಶದಲ್ಲಿ ತೀವ್ರವಾಗಿ ಮಿಡಿದಿರುವುದು, ಕಾವ್ಯ ಮತ್ತಷ್ಟು ರುಚಿ ಕಟ್ಟಲು ಕಾರಣವಾಗಿದೆ.

# ಶ್ರೀ ಬಾಲಗಂಗಾಧರನಾಥರ ಜೀವನ ಮತ್ತು ಸಾಧನೆ

ಶ್ರೀಆದಿಚುಂಚನಗಿರಿ ಮಠದ ೭೧ನೇ ಸ್ವಾಮೀಜಿಯಾಗಿ ನೇಮಕವಾದವರು ಶ್ರೀಬಾಲಗಂಗಾಧರನಾಥರು. ತೀರ ಹಿಂದುಳಿದ ಹಳ್ಳಿಯೊಂದರಲ್ಲಿ ಹುಟ್ಟಿ, ಬಡತನದ ಬೇಗೆಯಲ್ಲಿ ಬೆಂದು ವಿಶ್ವಮಾನ್ಯತೆಯನ್ನು ಪಡೆದು ಎಲ್ಲರ ಅಭಿಮಾನ, ಪ್ರೀತಿಗೆ ಕಾರಣರಾಗಿದ್ದಾರೆ. "ಆತ್ಮ ಸ್ಥೈರ್ಯ, ಸಾಧನೆಯ ಛಲ, ನಿರ್ಮಲ ಚಾರಿತ್ರ್ಯ, ಮಾನವೀಯ ಅಂತಃಕರಣದಂತಹ ಅಪೂರ್ವ ಗುಣಗಳೆಲ್ಲವೂ ಒಬ್ಬನೇ ವ್ಯಕ್ತಿಯಲ್ಲಿ ಮೇಳಯಿಸಿರುವುದರಿಂದ, ......... ದೇವಮಾನವರೆಂದು ಜನರು ಭಕ್ತಿ ಬಾವುಕತೆಯಿಂದ ಮಣಿಯುತ್ತಾರೆ" ಎಂದು ಡಾ.ಕೆ.ರಾಜೇಶ್ವರಿಗೌಡ ಅಭಿಮಾನದಿಂದ ನುಡಿದಿದ್ದಾರೆ. ದೇಶ–ವಿದೇಶಗಳಲ್ಲೆಲ್ಲ ಖ್ಯಾತಿವೆತ್ತ ಈ ಅಸಾಮಾನ್ಯ ಗುರುವಿನ ಜೀವನ, ಸಾಧನೆಗಳನ್ನು ಕವಿ ಸಿ.ಹನುಮೇಗೌಡರು ವಿನಯ ಪೂರ್ವಕವಾಗಿ ನೆನೆದಿದ್ದಾರೆ.

ಚುಂಚಾದ್ರಿ ಚಂದ್ರಿಕೆಯಲ್ಲಿ ಶ್ರೀಬಾಲಗಂಗಾಧರನಾಥರನ್ನು ಕುರಿತಾದ ವರ್ಣನೆಗಳು ಇಡೀ ಕಾವ್ಯದಲ್ಲೇ ಪ್ರಮುಖ ಮಿಡಿತವಾಗಿ ಹೊರಹೊಮ್ಮಿವೆ. ಸಂಚಿಕೆ–೧೬ರಿಂದ ಸಂಚಿಕೆ ೨೪ರವರೆಗೆ ಹರಡಿಕೊಂಡ ಈ ವರ್ಣನೆ, ಶ್ರೀಗಂಗಾಧರಯ್ಯನ ಪ್ರವೇಶ, ವಟುವಾದರು ಬಾಲಗಂಗಾಧರರು, ಶ್ರೀಬಾಲಗಂಗಾಧರರ ಗತಾಬ್ಧಗಳು, ಶ್ರೀಗಳ ವಿದೇಶ ಯಾತ್ರೆ, ತೋಯುವರು ಭಕ್ತಿ ಜಲದಿ, ಶಿಕ್ಷಣ ದಾಸೋಹ ಶಾಲೆಗಳ ಸರಮಾಲೆ, ಸಾಧನೆಗಳ ಸರಮಾಲೆ, ಶಾಲೆಗಳ ಸುರಿಮಳೆ – ಹೀಗೆ ಸುಮಾರು ೧೧೫ ಪುಟಗಳಲ್ಲಿ ನಿಲ್ಲದ ನದಿಯಾಗಿ ಹರಿದಿದೆ. ಹೆಜ್ಜೆ ಹೆಜ್ಜೆಗೂ ಭಕ್ತಿ–ಗೌರವಗಳನ್ನು ಹೊರಸೂಸುವ ಕವಿ, ಬಾಲಗಂಗಾಧರರನ್ನು ಒಂದು ದೈವಿಕ ಶಕ್ತಿಯೆಂತಲೇ ಭಾವಿಸಿದ್ದಾರೆ. ಎಲ್ಲರಲ್ಲೂ ಇರಬಹುದಾದ ಮಾನವ ಸಹಜ ದೌರ್ಬಲ್ಯಗಳು ಇವರಲ್ಲೂ ಇದ್ದು ಅವುಗಳನ್ನು ಸ್ವಾಮೀಜಿ ಗೆದ್ದು ನಿಂತಿರುವ ಚಿತ್ರಣ ಮೆಚ್ಚುವಂತಿದೆ. ಶ್ರೀ ಬಾಲಗಂಗಾಧರರನ್ನು ಕುರಿತಾದ ಕವಿಯ ಭಕ್ತಿ–ಭಾವಗಳು ಧನಾತ್ಮಕವಾಗಿ ದುಡಿದಿರುವುದು ಇಲ್ಲಿನ ಪ್ರಮುಖ ಅಂಶವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬಿಡದಿಯಿಂದ ಸುಮಾರು ೩ ಕಿ.ಮೀ ದೂರದಲ್ಲಿರುವ ಬಾನಂದೂರು, ಶ್ರೀ ಬಾಲಗಂಗಾಧರರ ಜನ್ಮಸ್ಥಳ. ನಾರಾಯಣ ಸ್ವಾಮಿ ಬೆಟ್ಟ, ಸಾವನದುರ್ಗ, ಕದಿರೆ ದೇವರ ಕಲ್ಲು, ಬೈರೇ ದೇವರ ಬೆಟ್ಟಗಳು ಈ ಗ್ರಾಮದ ಸುತ್ತಲೂ ಆವರಿಸಿಕೊಂಡಿರುವುದರಿಂದ, ಗ್ರಾಮಕ್ಕೆ ದೈವಿಕ ಸಾನಿಧ್ಯ ಸಹಜವಾಗಿ ಪ್ರಾಪ್ತವಾಗಿದೆ. ಬಾಲಗಂಗಾಧರರ ಜನನ ಸಂದರ್ಭವನ್ನು ವರ್ಣಿಸುತ್ತ ಕವಿ ಹೀಗೆ ಹೇಳುತ್ತಾರೆ:

**"ಬ್ರಾಹ್ಮಿಯಲಿ ಬೆಳಕೊಂದು ಬೆಳಗಿತ್ತೈ ಬಾನನ್ನು**
**ಸಾರುತ್ತ 'ಸಂಕ್ರಮಣ' ಸಂದೇಶವ**
**ಪ್ರಹರ್ಷದಿ ಪುಷ್ಪಹನಿ ಹರಿಸುತ್ತ ಹರಿಸಿತ್ತೈ**
**ದೇವಗಣ ದಿವಿಯಿಂದ ಕೋರಿ ಶುಭವ"**

ಕೃಷಿಕರಾದ ಚಿಕ್ಕಲಿಂಗಪ್ಪ ಮತ್ತು ಬೋರಮ್ಮ ದಂಪತಿಗಳೇ ಬಾಲಗಂಗಾಧರರ ತಂದೆ-ತಾಯಿಗಳು. ಚಿಕ್ಕಲಿಂಗಪ್ಪನವರು ಮೊದಲಿನಿಂದಲೂ ಆದಿಚುಂಚನಗಿರಿಯ ಧಾರ್ಮಿಕ ಸೇವೆಗಳಲ್ಲಿ ಭಾಗವಹಿಸುತ್ತಿದ್ದುದರಿಂದ ಮನೆಯಲ್ಲಿ ಶ್ರೀಮಠದ ಮಹಿಮೆ ಕುರಿತ ಮಾತುಕತೆಗಳನ್ನು ಕೇಳುತ್ತಲೇ ಗಂಗಾಧರರು ಬೆಳೆದರು. ತಾತ, ಅಂಚೆ ತಿಮ್ಮಯ್ಯನವರು ಧಾರ್ಮಿಕ ಶ್ರದ್ಧಾ-ಭಕ್ತಿ ಉಳ್ಳವರಾಗಿದ್ದರಿಂದ ಶ್ರೀಯುತರ ಮೇಲೆ ಅಪಾರ ಪ್ರಭಾವ ಬೀರಿದ್ದರು.

೧೮.೦೧.೧೯೪೫ರಂದು ಜನಿಸಿದ ಗಂಗಾಧರರು ಬಾನಂದೂರಿನಲ್ಲಿ ಪ್ರಾಥಮಿಕ, ಬಿಡದಿಯಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಕಲಿತರು. ರಾಮನಗರದಲ್ಲಿ **"ಭೂಗೋಳ ಭಾಷೆ ಮೇಣ್ ವಿನೂತನ ವಿಜ್ಞಾನ, ಕಲಿತನೈ ಕಲಿ ಪ್ರೌಢಶಾಲೆಯಲ್ಲಿ". "ಸುಮನೋಜ್ಞ ಸುಕುಮಾರ ಯಶವ ಪಡೆಯೆ ಹತ್ತನೆಯ ತರಗತಿಯ ಪಬ್ಲಿಕ್ ಪರೀಕ್ಷೆಯಲಿ. ರಾಮನಗರ ಪ್ರೌಢಶಾಲೆಯಲಿ ಸಿಕ್ಕಿತೈ ಕೆಲಸ ಯುವಕ ಗಂಗಾಧರಯ್ಯನಿಗೆ"**. ಕಲಿಯುವ ಆಸೆ ತೀವ್ರ ಕಾಡುತ್ತಿದ್ದುದರಿಂದ, ಕೆಲಸ ಬಿಟ್ಟು ಮತ್ತೆ ಓದಲು ಬೆಂಗಳೂರಿನ ಸರ್ಕಾರಿ ವಿಜ್ಞಾನ ಕಾಲೇಜು ಸೇರಿದರು. ವಿಜ್ಞಾನದಲ್ಲಿ ಪದವೀಧರರಾದ ಶ್ರೀಯುತರು ಅದಿಚುಂಚನಗಿರಿ ಮಠದ ಸಂಪರ್ಕಕ್ಕೆ ಬಂದರು. ತಾಯಿ ಬೋರಮ್ಮನವರು ಕಾಲ್ನಡಿಗೆಯಲ್ಲೇ ಬಾನಂದೂರಿನಿಂದ ಆದಿಚುಂಚನಗಿರಿಗೆ ಒಂಭತ್ತು ಬಾರಿ ಹೋಗಿ ಬಂದಿದ್ದರೆಂದರೆ, ತಾಯಿಯ ಪ್ರಭಾವ ಮಗನ ಮೇಲೆ ಸಹಜವಾಗಿ ಬೀರಿತು.

ಆಸ್ತಿಯ ಒಡೆತನದ ಕಾರಣಕ್ಕೆ ಗಂಗಾಧರರ ದಾಯಾದಿಗಳು, ತಾಯಿ ಬೋರಮ್ಮನವರ ವಿರುದ್ಧ ಬಂದೂಕಿನಿಂದ ಹೊಡೆದಾಗ ಅದೃಷ್ಟವಶಾತ್ ಆಕೆ ಬದುಕುಳಿದರು. ಈ ಪ್ರಕರಣ ಬಾಲಗಂಗಾಧರರ ಮೇಲೆ ತೀವ್ರ ಪರಿಣಾಮ ಉಂಟು ಮಾಡಿ, 'ಲೌಕಿಕ ಸುಖ-ಭೋಗಗಳೆಡೆಗೆ ವಿರಕ್ತಿಯಿಂದ ನೋಡುವಂತಾಯಿತು. ಊರಿನ ಹಿಪ್ಪೇ ಮರದ ಕೆಳಗೆ ಕುಳಿತು ತಾನು ಮುಂದೇನಾಗಬೇಕೆಂದು ಸದಾ ಚಿಂತಿಸುತ್ತಿದ್ದರೆಂದು ಕವಿ ಹೇಳುತ್ತಾರೆ. ಅಲ್ಲಿಂದಾಚೆಗೆ ಆದಿಚುಂಚನಗಿರಿಯ ಸಂಪರ್ಕ ತೀವ್ರವಾಗಿ, ದಿನಾಂಕ: **೧೨-೦೨-೧೯೬೮**ರಂದು ಅಂದಿನ ೭೦ನೇ ಪೀಠಾಧೀಶರಾಗಿದ್ದ ಶ್ರೀ ರಮಾನಂದನಾಥರು ಗಂಗಾಧರರಿಗೆ 'ಬಾಲಗಂಗಾಧರನಾಥ ಸ್ವಾಮಿ'ಗಳೆಂದು ಹೊಸ ಹೆಸರು ನೀಡಿ ಸನ್ಯಾಸ ದೀಕ್ಷೆ ಬೋಧಿಸಿದರು. ಚಾಮರಾಜಪೇಟೆಯಲ್ಲಿನ **'ಜಯಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆ'**ಗೆ ಸೇರಿ ಸಂಸ್ಕೃತ ಪಾಠ ಕಲಿತರು. ದಿನಾಂಕ:**೨೪-೦೯-೧೯೭೪**ನೇ ದಿನದಂದು, ಬಾಲಗಂಗಾಧರರು ಆದಿಚುಂಚನಗಿರಿಯ ೭೧ನೇ ಪೀಠಾಧೀಶರಾದರು. ಅಂದು "ಅಕಾಲದಲ್ಲೂ ಹೂಮಳೆಯಾದದನ್ನು, ತೇರು ಬೀದಿಯ ಬೇವಿನ ಮರದಲ್ಲಿ ಯಥೇಚ್ಛ ಹಾಲು ಸುರಿದುದನ್ನು, ದೇವಾಲಯದ ಗಂಟೆ ತಂತಾನೆ ನಿನದಿಸಿದ್ದನ್ನು ಇಂದಿಗೂ ಭಕ್ತರು ನೆನೆಸುತ್ತಾ"ರೆಂದು ಡಾ.ಕೆ.ರಾಜೇಶ್ವರಿಗೌಡ ಹೇಳುತ್ತಾರೆ. ಆದರೆ ಮೊದಲಿಗೆ ಗೆಳೆಯರು ಮಠಾಧೀಶರಾಗುವಂತೆ ಒತ್ತಾಯಿಸಿದಾಗ ಬಾಲಗಂಗಾಧರರು,

**"ತಿಳಿದಿಲ್ಲ ತಪವೆನಗೆ ಅರಿತಿಲ್ಲ ಆಧ್ಯಾತ್ಮ**
**ಸೊರಗಿಲ್ಲ ಷಡರಿಗಳು ಅನಭಿಜ್ಞನು**
**ತೊಲಗಿಲ್ಲ ತಮಂಥವು ಅಳಿದಿಲ್ಲ ಆಸೆಗಳು**
**ಭವ ಮಠದ ಭಾರವನು ಹೊರಲಾರೆನು"**

– ಎಂದೇ ಅನುಮಾನ ಪಟ್ಟರಂತೆ. **"ದೊರಕದೈ ದಿವ್ಯತರ ಅವಕಾಶ ಅನುದಿನವು, ಒಮ್ಮೆ ಅದು ಒದಗುವುದು ಜೀವನದಲಿ"** ಎಂದು ಸಖರು ಒತ್ತಾಯಿಸಿದಾಗ ಹಿಂಜರಿಯುತ್ತಲೇ ಒಪ್ಪಿಕೊಂಡರಂತೆ. ತಂದೆ–ತಾಯಿಗಳ ಒಪ್ಪಿಗೆ ಕೇಳಲು ಊರಿಗೆ ಬಂದಾಗ,

**"ಸ್ವೀಕರಿಸಿ ಸಂನ್ಯಾಸ ಸುಖ ಸಿಗದೆ ಸಂಸಾರಿ**
**ತಾವಾಗೆ ತೊರೆದಿಹರು ಕಾವಿ ಕವಚ**
**ಸುಖ ನಿನಗೆ ಸಿಕ್ಕದೈ ವೇಷ ಮೇಣ್ ವಸ್ತ್ರದಿಂ**
**ಸೋಗಿಗದು ಸುಖಕಲ್ಲ ಕಾಣೊ ಹುಚ್ಚ"**

ಎಂದು ಎಚ್ಚರಿಸಿದರಂತೆ. ತಂದೆ ಚಿಕ್ಕಲಿಂಗಪ್ಪನವರಂತೂ "ಸುಖಪಡಲು ಸಂಸಾರಿಯಾಗೆಂದು ಯಥಾಚಿತ್, ಪುತ್ರಂಗೆ ಪೆರ್ಮೆಯಿಂದಲೆ ಪೇಳ್ದರು" ಎಂದು ಕವಿ ಸೊಗಸಾಗಿ ವರ್ಣಿಸುತ್ತಾರೆ. "ಜರ್ಜರಿತ ಜನಮನದಿ ಅಡಗಿರುವ ಅಘ ತೊಳೆಯೆ ಕರುಣೆಯಿಂ ಕೊಡು ತಾಯಿ ಅವಕಾಶವ" ಎಂದು ತಾಯಿಯನ್ನು ಭಿನ್ನವಿಸಿಕೊಂಡಾಗ, ಆಕೆ

**"ಪಡೆಯುತ್ತ ಪದವಿಯನು ಆಗುವನು ಅಧಿಕಾರಿ**
**ನನ್ನ ಮಗನೆಂದೆನುತ ಹಿರಿ ಹಿಗ್ಗಿದೆ**
**ಮಾಡುತ್ತ ಮದುವೆಯನು ಮೊಮ್ಮಗನ ಮೊಮ್ಮಗಳ**
**ಮನಸಾರ ಮುದ್ದಾಡೆ ಇಚ್ಛಿಸಿದ್ದೆ"**

ಎಂದೆಲ್ಲ ಗೋಳಾಡುತ್ತಾರೆ. **"ಸರ್ವರನು ಸಲಹುವನು ಸರ್ವೇಶ ಶಂಕರನು, ಅಮ್ಮ ನೀ ಅಂಜದಿರು ದುಃಖ ಬೇಡ"** ಎಂದು ಧೈರ್ಯ ತುಂಬಿದ ಬಾಲಗಂಗಾಧರರು ಆದಿಚುಂಚನಗಿರಿಯತ್ತ ಗಮನಹರಿಸಿದರೆಂದು ಕವಿ ವರ್ಣಿಸುತ್ತಾರೆ.

ಚುಂಚನಗಿರಿಯಲ್ಲಿ ಕಟ್ಟಡವನ್ನು ಕಟ್ಟಿಸುವ, ಬೇಸಾಯ ಮಾಡುವ ಕೆಲಸಗಳು ಗಂಗಾಧರರಿಗೊದಗಿದವು. ತಮ್ಮ ಪಾಲಿಗೆ ಬಂದ ಕೆಲಸವನ್ನು ಶ್ರದ್ಧೆ, ನಿಷ್ಠೆಗಳಿಂದ ಮಾಡುತ್ತಿದ್ದ ಗಂಗಾಧರರು ಎಲ್ಲರ ಅಭಿಮಾನಕ್ಕೆ ಕಾರಣರಾಗಿದ್ದರು. ಬೆಟ್ಟದಡಿಯಲ್ಲಿ ಬಾವಿ ತೋಡಿಸಿ, ಒಳ್ಳೆಯ ನೀರು ಕಂಡಾಗ ಸುತ್ತಮುತ್ತಣ ಜನ ಸಂತೃಪ್ತರಾದರು; ತೋಟದಲ್ಲಿ ತರಕಾರಿ ಬೆಳೆಯುವಲ್ಲಿಯೂ ಆಸಕ್ತಿ ತೋರುತ್ತಿದ್ದರು; ಅಡಿಗೆ ಮನೆ ಕಟ್ಟಿಸಿದರು; ಚುಂಚನಗಿರಿ ಬೆಟ್ಟ ತಲುಪಲು ಇದ್ದ ಮಾರ್ಗವನ್ನು ಅಗಲಗೊಳಿಸಿ, ವಿದ್ಯಾರ್ಥಿಗಳಿಗಾಗೇ ವಸತಿಗೃಹ ನಿರ್ಮಿಸಿದರು. ಸುತ್ತ ಮುತ್ತಲ ಹಳ್ಳಿಗಳನ್ನೆಲ್ಲ ಸಂಚರಿಸಿ, ಭಕ್ತಾದಿಗಳನ್ನು ದಾನಿಗಳನ್ನು ಸಂಪರ್ಕಿಸಿ ಮಠದ ಅಭಿವೃದ್ಧಿಗೆ ಬೇಕಾದ ಧನ ಧಾನ್ಯಗಳನ್ನು ಸಂಗ್ರಹಿಸಿದರು. ಗೋವುಗಳ ಪಾಲನೆಯೂ ಶ್ರೀಯುತರಿಗೆ ಆಸಕ್ತಿದಾಯಕ

ಕೆಲಸವಾಗಿತ್ತು. **"ಗುರು ಮಠದ ಗುರುತರದ ಭಾರ"**ವನ್ನು ಹೊತ್ತ ಬಾಲಗಂಗಾಧರರನ್ನು ಕಾಣಲು **"ಜನಗಣವು ಜಯಕಾರ ಮಾಡುತ್ತ ಮಂದಿರಕೆ"** ಬರುತ್ತಿದ್ದರು. **"ಭಕ್ತ ಜನ ಬರುತಿರಲು ಹೂಮಳೆಯು ಹರಿಯುತಿರೆ ನವಿಲುಗಳು ನರ್ತಿಸುತ ಹರ್ಷಿಸಿದವು"** ಎಂದು ಕವಿ ಕೊಂಡಾಡಿದ್ದಾರೆ.

***ವಿದೇಶ ಯಾತ್ರೆ:***

ಬಾಲಗಂಗಾಧರರ ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆಗಳು ವಿದೇಶಗಳಲ್ಲೂ ಪ್ರಚಾರ ಮಾಡಿದವು. ಅಮೇರಿಕಾದ ಭಾರತೀಯರು ಒಮ್ಮೆ ಬಾಲಗಂಗಾಧರರು ತಮ್ಮಲ್ಲಿಗೆ ಬರಬೇಕೆಂದು ಆಹ್ವಾನವಿತ್ತರು. ಅವರ ಆಹ್ವಾನಕ್ಕೆ ಓಗೊಟ್ಟ ಗಂಗಾಧರರು, ಅಮೇರಿಕಾಗೆ ಹೋಗಿ ಅಲ್ಲಿನ ಜನರನ್ನು ಕಂಡು ಜನ್ಮಾಂತ್ಯ ಮಾರ್ಗವನ್ನು ಬೋಧಿಸಿದರು:

**"ಕಲ್ಲಿನಲಿ ಕಡೆದ ಕಲೆ ಕಾಗದದಿ ಕೊರೆದ ಕಲೆ**
**ವರ್ಣಗಳ ವಿವಿಧ ಕಲೆ ರಮಣೀಯವು**
**ಬಾಳ ಕಲೆ ಬಹುಗಾಢ ಕಂಜಭವ ಕಡೆದಿರುವ**
**ಸುಖದುಃಖ ಸಿಹಿಕಹಿಯ ಕಲೆ ಗೂಢವು"**

**"ರಸಮಯ ಕರುಣಾಮೃತದಾಧ್ಯಾತ್ಮವ"** ಹೀರಿ ಸುಖಿಸಿದ ಜನ, ಧನ್ಯರಾಗಿ ಗಂಗಾಧರರನ್ನು ಬೀಳ್ಕೊಟ್ಟರು. ಅಲ್ಲಿಂದ ನೇರವಾಗಿ ಲಂಡನ್ನಿಗೆ ಬಂದಿಳಿದ ಶ್ರೀಯುತರು,

**"ಭವ್ಯವಹ ಬಕಿಂಗ್ ಹ್ಯಾಂ ತೆರೆಮಾಲೆ ಥೇಮ್ಸ್ ನೋಡಿ**
**ಭೂಮಿಯೊಳ್ ಬಹು ಸಂಚರಿಪ ರೈಲಲಿ**
**ತಾವಂದು ತಿಳಿದರೈ ಸಂಚರಿಸಿ ಸಂತಸದಿ**
**ಮಾನವನ ಮೇರು ಸಾಧನೆಯನಲ್ಲಿ"**

ಮತ್ತೆ ಅಮೇರಿಕೆಗೆ ಭೇಟಿಯಿತ್ತ ಗಂಗಾಧರರು ಅಕ್ಸ್‌ಫರ್ಡ್ ವಿಶ್ವವಿದ್ಯಾಲಯವನ್ನು ಕಣ್ತುಂಬ ನೋಡಿ ತಣಿದರು.

**"ನ್ಯೂಯಾರ್ಕನು ತಲುಪುತ ನ್ಯೂಕ್ಲಾಸನು ಸೇರುತ**
**ಪೆರ್ಮಯಿಂ ಫ್ಲಿಂಟ್‌ಗೆ ಭಕುತರೊಡಗೂಡಿ**
**ದಯಾಮಯಿ ಧಾಮ ನಿಧಿ ಪೋದರೈ ಫಿಲಡಲ್ಫಿ**
**ಯದಲಿ ಪಳೆಯಾ ಸ್ಮಾರಕಗಳ ನೋಡಿ"**

ಟೊರೆಂಟೋ ನಗರ, ಆಂಟೋರಿಯವ, ನಯಾಗರ ಜಲಪಾತ, ಫ್ಲಿಂಟ್ ಕೈಗಾರಿಕಾ ಕೇಂದ್ರ, ಮಿಚಿಗನ್ ನಗರ, ಚಿಕಾಗೋ ನಗರ, ಸ್ಯಾನ್‌ಫ್ರಾನಿಸ್ಕೋ, ಓಲ್‌ಲಾಂಡ್ಯ್ ನಡುವಿರುವ ಶಾಂತಿ ಸಾಗರ, ಡಿಸ್ನಿಲ್ಯಾಂಡ್, ಲಾಸ್‌ವೆಗಾಸ್, ಪಿಟ್ಸ್‌ಬರ್ಗ್, ಇಸ್ಕಾನ್ ದೇಗುಲ, ಟ್ರಂಟಾಸ್, ವಾಷಿಂಗ್‌ಟನ್, ಮೊದಲಾದ ನಗರಗಳನ್ನೆಲ್ಲ ದರ್ಶಿಸಿ ತಾವು ಭೇಟಿಯಿತ್ತ ಜಾಗಗಳಲ್ಲೆಲ್ಲ ಧರ್ಮೋಪದೇಶ ಮಾಡಿ ಬಂದರೆಂದು ಕವಿ ವರ್ಣಿಸುತ್ತಾರೆ. ಫ್ಲಿಂಟ್‌ನಲ್ಲಿ ಗಂಗಾಧರರು ಬೋಧಿಸಿದ್ದನ್ನು ಕವಿ ವರ್ಣಿಸುತ್ತಾರೆ:

"ರತಿ ರಸವು ರೋಗ ಮೇಣ್ ಮೃತ್ಯುವಿನ ಮೃದಂಗವು
ಮದ ಮೋಹ ಮಾತ್ಸರ್ಯ ಶತ್ರುಕೂಟ
ಕುತ್ಸಿತದ ಕ್ರೋಧವೇ ಭಯಾನಕ ಬಡಬಾಗ್ನಿ
ಲೋಭವೇ ಲಯಾಂತಕ ಗರಳದೂಟ"

***ಕುವೆಂಪು ಭೇಟಿ***

ಒಮ್ಮೆ ಕುವೆಂಪುರವರು ಬಾಲಗಂಗಾಧರರನ್ನು ಆಹ್ವಾನಿಸಿ, ಮನುಷ್ಯ ಜೀವನವನ್ನು ನಡೆಸುತ್ತಿರುವ ಶಕ್ತಿಯ ಸ್ವರೂಪದ ಬಗ್ಗೆ ವಿಚಾರಿಸುತ್ತಾರೆ:

**ಅದೃಶ್ಯವು ಆತ್ಮವೇನ್? ರಸಭಾವ ರಹಿತವೇನ್**
**ದೇಹಕ್ಕೆ ದೊರೆಯೆ ರೂಪರಹಿತನೇನ್**
**ಮದಕಾಮ ಮೋಹಗಳ ಮಾಯೆಯೇನ್ ಮುಸುಗಿಹುದೆ**
**ಪೇಳಿ ನೀವ್ ಪರಮ ಗುರು ಸತ್ಯವನ್ನು**

–ಎಂದು ಕುವೆಂಪು ಕೇಳಿದಾಗ, ಬಾಲಗಂಗಾಧರರು,

**"ವಿಶ್ವದಾ ವ್ಯವಹಾರ ಮುತ್ತಿರಲು ಮಾನಸವ**
**ಬವಣೆಯಿಂ ಬಳಲಿಹುದು ಜೀವಾತ್ಮವು**
**ವಿಶ್ವಾತ್ಮ ವಾರಿಧಿಯ ಜೀವಾತ್ಮ ಜಲಬಿಂದು**
**ಸೇರುವುದು ಸವೆದಲ್ಲಿ ಕರ್ಮ ಕಸವು"**

–ಎಂದು ಹೇಳಿದರೆಂದು ಕವಿ ವರ್ಣಿಸಿದ್ದಾರೆ.

***ತತ್ವ ಬೋಧನೆ:***

ಗುರು ಹಿರಿಯರ ಬೋಧನೆ, ಶಾಸ್ತ್ರ ಕೃತಿಗಳ ಆಳ ಅಧ್ಯಯನ, ಧಾರ್ಮಿಕ ಸಂಸ್ಕಾರಗಳ ಫಲ, ಬಾಲಗಂಗಾಧರರು ಬದುಕಿನ ಪ್ರತೀ ಅಂಗಾಂಗಗಳನ್ನು ಕುರಿತು ಯೋಚಿಸುವಂತೆ ಮಾಡಿವೆ. ಆತ್ಮ – ಪರಮಾತ್ಮನಂಥ ಆಧ್ಯಾತ್ಮಿಕ ವಿಷಯದಿಂದ ಹಿಡಿದು ಮೃದುಮಾತಿನಂಥ ಲೌಕಿಕ ವಿಚಾರದವರೆಗೂ ಅವರ ವಾದ ಸರಣಿ ಬೆಳೆಯುತ್ತದೆ. ಸುದೀರ್ಘ ಬೋಧನೆಯ ಹಲವು ಮಜಲುಗಳನ್ನು ಸರಳವಾಗಿ ಹೇಳುವುದು ಒಂದು ಸವಾಲೇ! ಆದರೆ ಕವಿ ಹನುಮೇಗೌಡರು ಕಠಿಣ ಬೋಧನಾ ವಿವರಗಳನ್ನೂ, ಹೃದ್ಯವೆನಿಸುವಂತೆ ಸರಳ–ಸುಂದರವಾಗಿ ಚಿತ್ರಿಸಿದ್ದಾರೆ.

**"ಸತ್ಯಕ್ಕೆ ಸಾವಿಲ್ಲ ನುಡಿಯದಿರು ನೀನಪ್ರಿಯ ಸತ್ಯವ"** ಎಂದು ಎಚ್ಚರಿಸುವ ಶ್ರೀಯುತರು **"ನುಡಿ ಸತ್ಯವ, ಮಿಥ್ಯವೇ ಮೃತ್ಯುವೈ"** ಎಂದು ಸತ್ಯದ ಅಗತ್ಯತೆಯನ್ನು ಪರಿಚಯಿಸುತ್ತಾರೆ. ಸುಮ್ಮನೆ ಶಾಸ್ತ್ರವನ್ನು ಪಠಿಸಿದಾಕ್ಷಣ ಆತ ಪಂಡಿತನೆನಿಸಿಕೊಳ್ಳುವನೇ? ಕ್ರಿಯಾತ್ಮಕನಾದ ಕರ್ಮಯೋಗಿ ಮಾತ್ರ ಪಂಡಿತನೆನಿಸಿಕೊಳ್ಳಲು ಸಾಧ್ಯವೆನ್ನುವುದಕ್ಕೆ ಆಧಾರ ನೀಡುವ ಕವಿ, **"ಒರೆಯೆ ನೀ ಔಷಧಿಯ, ರೋಗಿಯು ನಿರೋಗಿಯಾಗನ್ನೈ ನುಂಗಲದನಾಗುವನು ನಗುತ"** ಎಂದಿದ್ದಾರೆ. **"ಬೇರೆಯವರ ಹಣ ಪಾಷಾಣ, ಪರಭಕ್ತಿ ಪೀಯೂಷ, ಪರರ ಸತಿ ಮಾತೃವಂತೆ"** ಎನ್ನುವ ಅವರು **"ನರರುಗಳ ನಂಟರೈ**

**ಪ್ರಾಣಿಗಳು ಪಕ್ಷಿಗಳು ಜೀವಿ ಮೇಣ್ ಜಂತುಗಳು ಮರ್ತ್ಯದೊಳಗೆ"** ಎಂದು ಖಗ-ಮೃಗಗಳೂ ಮಾನವನಿಗೆ ಸಂಗಾತಿಯಂತೆ ಎಂಬ ಸಂದೇಶ ನೀಡಿದ್ದಾರೆ.

**"ದುಷ್ಟಜನ ದೌರ್ಜನ್ಯ ನಡೆಸಿದರೆ ನಿರ್ವ್ಯಗ್ರ**
**ಧೈರ್ಯದಿಂದವನ ನೀ ಮೆಟ್ಟಬೇಕು**
**ಕಷ್ಟಗಳು ಕಾಡುತಿರೆ ದಿಟ್ಟತನದಿಂದವನು**
**ನಿಗ್ರಹಿಸಿ ನಿರಂತರ ತುಳಿಯಬೇಕು".**

ರವಿ-ಚಂದ್ರರನ್ನು ರಾಹು-ಕೇತು ಗ್ರಹಗಳು ಕಾಡಿದರೂ ಜಗವನ್ನು ಹಗಲು-ರಾತ್ರಿ ಬೆಳಗುವರು; ಹಾಗೆಯೇ ಕಾಡುಗಳನ್ನು ಕಡಿದರೂ, ವೃಕ್ಷಗಳು ನಿತ್ಯ ಫಲ ನೀಡುವ ಸೇವಾ ಮನೋಭಾವ ಅರಿತುಕೊಳ್ಳಬೇಕಾದ ಅಗತ್ಯವಿದೆಯೆಂದು ಬಾಲಗಂಗಾಧರರು ಬೋಧಿಸಿದ್ದಾರೆ. ಮೆದುವಾದ ಮಾತಿನಲಿ ಮಾರ್ದವತೆ ಇದೆ. ಮುತ್ತಿನ ಮಣಿಗಳಂತೆ ಹೊಳೆವ ಶಕ್ತಿ ಅದಕ್ಕಿದೆ. ಆದರೆ **'ಬೆರ್ಚಿಸುವ ಬಿರುನುಡಿಯು ಭಯಾನಕ ಭವಪಾಶದಂತೆ; "ದುಡಿಮೆಯೇ ಧನಲಕ್ಷ್ಮಿ, ಕಾಯಕವೇ ಕೈಲಾಸ, ದೀಹವಿದು ದೇವನಿಹ ದೇವತಾಣ"** ಹೀಗಿರುವಾಗ, ದುಡಿಯದೆಯೆ ದೈವವನು ನಿಂದಿಪುದು ಸರಿಯಲ್ಲ; ಅತಿಯಾದ ಆಹಾರ ನಿದ್ರೆ, ನಿರಾಸೆಗಳನ್ನೆಲ್ಲ ನಿಯಂತ್ರಿಸಬೇಕು; ಶಸ್ತ್ರದಿಂದ ಶರೀರವನ್ನು ಸೋಲಿಸಬಹುದು, ದೇಹದ ದಮನದಿಂದ ತನುವು ನಾಶವಾಗುತ್ತೆ. ಶಸ್ತ್ರಾಸ್ತ್ರಗಳ ಬಲ ತೊರೆದು, ಬುದ್ಧಿಯಿಂದ ಸೋಲಿಸಿದರೆ ಶತೃವಿನ ಯಶಸ್ಸು ನಾಶವಾಗುತ್ತದೆ; ಮೋಡಗಳು ಮಳೆಗರೆದು ಭುವಿಯಲ್ಲಿ ಸಸಿ ಬೆಳೆಸಿ ನರರಿಗವು ಧನ ಧಾನ್ಯ ನೀಡುತ್ತವೆ, ಹಾಗೆಯೇ ಬಡತನದಿಂದ ಬಳಲಿರುವ ಜನರಿಗೆ ಸಾಧು ಸಂತಗಣಗಳಿಂದ ಸಾಂತ್ವನ ಸಿಗುತ್ತದೆ;

**"ಹಣದಾಸೆ ಹೊಂದಿರದ ಮಾನವನ ಮನ ಶುದ್ಧ**
**ನುಡಿಯಲ್ಲಿ ನಡತೆಯಲಿ ಶುದ್ಧಿ ಇರಲಿ**
**ಜ್ಞಾನಿಯೂ ಜ್ಞಾನದಲಿ ಶುದ್ಧ ಮೇಣ್ ಶ್ರೇಷ್ಠನಿಹ**
**ಹೃನ್ಮನವು ಹರ್ಷದಿಂ ತುಳುಕುತಿರಲಿ"**

ಕಳ್ಳರು ಚಂದ್ರನನ್ನು, ವೇಶ್ಯೆಯರು ಸಾಧ್ವಿಯರನ್ನೂ, ದುರುಳರು ಸಜ್ಜನರನ್ನೂ, ಬರ್ಬರರು ಬುದ್ಧರನ್ನೂ, ಕುಲಹೀನರು, ಕುಲೀನರನ್ನೂ ದೂಷಿಸುತ್ತಾರೆ. ದೂಷಣೆಗೆ ಹೆದರಬಾರದು; "ಸದ್ವಿದ್ಯೆ, ಸದ್ಬುದ್ಧಿ, ಸದ್ಧರ್ಮ, ಸಂಪತ್ತು, ಸುಜ್ಞಾನ, ಸುವಿವೇಕಗಳಿಸಬೇಕು, ಸಾಧಿಸಲು ಸತ್ಕಾರ್ಯ ಸಲ್ಲಿಸಲು ಸತ್ಸೇವೆ ಸಜ್ಜನರ ಸಹವಾಸ ದೊರಕಬೇಕು";

**"ದಿಕ್ಕಿರದ ಧನರಹಿತ ಮಾನವನು ಮುದಿಕೊರಡು**
**ಹಲ್ಕಿತ್ತ ಹಾವ್ ತೆರದಿ ಹಣವಿರದವ**
**ರೆಕ್ಕೆಗಳ ರಹಿತವಹ ಹಕ್ಕಿಗಳ ಹಾಗಿರುವ**
**ನೀರಿರದ ನದಿ ಹಾಗೆ ಬತ್ತಿ ಬಡವ".**

ಆನೆ ಕಾಲಿನಿಂದ ಮುಟ್ಟಿದೊಡೆ ಮರಣ, ಸರ್ಪ ಸೋಕಿದರೆ ಸಾವು, ಆದರೆ ದುಷ್ಟ ಜನರು ಸಂಭ್ರಮದಿಂದ ದಿನ ನಿತ್ಯವೂ ಕೊಲ್ಲುತ್ತಿರುತ್ತಾರೆ. ಸರ್ಪಕ್ಕಿಂತಲೂ ದಾರುಣ ದುರ್ಜನರ ದೌರ್ಜನ್ಯ.

ಅವರನ್ನು ಮಂತ್ರದಿಂದ ದಂಡಿಸಲು ಸಾಧ್ಯವಿಲ್ಲ. ಏಕೆಂದರೆ, **"ಸರ್ಪಕೆ ವಿಷವಿಹುದೈ ಹಲ್ಲಿನಲಿ, ಹಲ್ಲಿಗಿದೆ ದೇಹದಲಿ, ದುಷ್ಟರಿಗೆ ಹೃನ್ಮನದಲಿ".**

***ಶಿಕ್ಷಣ ದಾಸೋಹ:***

'ಶಿಕ್ಷಣ ಮಾತ್ರವೇ ಮನುಷ್ಯನನ್ನು, ಮನುಷ್ಯನನ್ನಾಗಿಸಲು ಸಾಧ್ಯ' ಎನ್ನುವುದನ್ನು ಬಾಲಗಂಗಾಧರರು ಚೆನ್ನಾಗಿ ಅರಿತಿದ್ದರು. ಹೀಗಾಗಿ ತಮ್ಮ ಮಠದ ವತಿಯಿಂದ ಧಾರ್ಮಿಕ, ಆಧ್ಯಾತ್ಮಿಕ ಆಚರಣೆಗಳಿಗಿಂತಲೂ ಹೆಚ್ಚಾಗಿ ಶೈಕ್ಷಣಿಕ ಕ್ಷೇತ್ರ ಉನ್ನತಿಯತ್ತ ಸಾಗಲು ಶ್ರಮಿಸಿದ್ದಾರೆ. **'ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್'** ಎನ್ನುವ ಹೆಸರಿನಲ್ಲಿ ಸಮಿತಿ ರಚಿಸಿ ಅದರ ಅಧ್ಯಕ್ಷರಾಗಿರುವ ಶ್ರೀಯುತರು, ಸಮಾಜದಲ್ಲಿನ ಮೂಢನಂಬಿಕೆ, ಅಂಧಶ್ರದ್ಧೆ, ಜಾತೀಯತೆ, ಕಂದಾಚಾರಗಳು ತಪ್ಪಬೇಕಾದರೆ, ಶಿಕ್ಷಣ ನೀಡುವುದು ಅನಿವಾರ್ಯವೆಂದು ದೃಢವಾಗಿ ನಂಬಿದ್ದಾರೆ. ನಗರದಲ್ಲಿರುವ ವಿದ್ಯಾರ್ಥಿಗಳಿಗೆ ಸರಿಸಮಾನವಾಗಿ ಹಳ್ಳಿಗಾಡಿನ ವಿದ್ಯಾರ್ಥಿಗಳಿಗೂ ವಿದ್ಯೆಯ ಧಾರೆಯೆರೆಯಬೇಕೆಂದು ನಿಶ್ಚಯಿಸಿದವರು, ಶಾಲಾ ಕಾಲೇಜುಗಳನ್ನು ವೃತ್ತಿ ಶಿಕ್ಷಣ, ತಾಂತ್ರಿಕ ಮತ್ತು ವೈದ್ಯಕೀಯ ಮಹಾವಿದ್ಯಾಲಯಗಳನ್ನು ಸ್ಥಾಪಿಸಿದ್ದಾರೆ. ಶ್ರೀ ಮಠದ ಟ್ರಸ್ಟ್ ವತಿಯಿಂದ ಸುಮಾರು ೨೫೦ಕ್ಕೂ ಹೆಚ್ಚಿನ ಶಿಕ್ಷಣ ಸಂಸ್ಥೆಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಮಂಡ್ಯ ಜಿಲ್ಲೆಯಲ್ಲಿರುವ ಶ್ರೀಮಠದ ಒಟ್ಟು ಶಾಲಾ-ಕಾಲೇಜುಗಳ ಸಂಖ್ಯೆ ಐವತ್ತು. ಪೂರ್ವ ಪ್ರಾಥಮಿಕ ಎಂಟು, ಪ್ರಾಥಮಿಕ ಮೂರು, ಮಾಧ್ಯಮಿಕ ಮೂರು ಮತ್ತು ಪ್ರೌಢಶಾಲೆಗಳು ಹದಿನಾಲ್ಕು, ಪದವಿ ಪೂರ್ವ ಕಾಲೇಜು ಆರು. ಈ ಎಲ್ಲ ಹಂತಗಳಲ್ಲೂ ಕನ್ನಡ ಮತ್ತು ಆಂಗ್ಲ ಮಾಧ್ಯಮಗಳಿವೆ. ಒಂದು ಪದವಿ ಕಾಲೇಜು, ಒಂದು ವೈದ್ಯಕೀಯ ಕಾಲೇಜು, ಆಸ್ಪತ್ರೆ ಹಾಗೂ ಸಂಶೋಧನಾ ಕೇಂದ್ರ, ಒಂದು ನರ್ಸಿಂಗ್ ಶಾಲೆ. ಒಂದು ನರ್ಸಿಂಗ್ ಕಾಲೇಜು, ಡಿ.ಫಾರ್ಮ, ಬಿ.ಫಾರ್ಮ, ಸಿ.ಪಿ.ಎಡ್, ಗುರುಕುಲ ಮಾದರಿಯ ಮಾಧ್ಯಮಿಕ ಶಾಲೆ, ನಾಲ್ಕು ಸಂಸ್ಕೃತ ವೇದಾಗಮಗಳ ಶಾಲೆಗಳು, ಕೈಗಾರಿಕಾ ತರಬೇತಿ ಸಂಸ್ಥೆ – ಇವು ಇಲ್ಲಿ ಸ್ಥಾಪಿತವಾದ ಶಿಕ್ಷಣ ಸಂಸ್ಥೆಗಳೆನಿಸಿವೆ.

ಆದಿಚುಂಚನಗಿರಿಯಲ್ಲಿ **'ಶ್ರೀ ಗಂಗಾಧರೇಶ್ವರ ಸ್ವಾಮಿ ಸಂಯುಕ್ತ ಪದವಿ ಪೂರ್ವ ಕಾಲೇಜು'** ಸ್ಥಾಪಿಸಿ ಪ್ರತಿ ವರ್ಷ ಒಂದು ಸಾವಿರಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ಕಲಿಯಲು ಅವಕಾಶ ಮಾಡಿಕೊಡಲಾಗಿದೆ. ಉಚಿತ ಊಟ, ವಸತಿ ನೀಡುತ್ತಿದ್ದು ವಿಶಾಲ ಆಟದ ಮೈದಾನ, ಗ್ರಂಥಾಲಯಗಳ ವ್ಯವಸ್ಥೆ ಇದೆ. ಶ್ರೀ ಆದಿಚುಂಚನಗಿರಿ ಪ್ರಥಮ ದರ್ಜೆ ಕಾಲೇಜು ೧೯೭೪ರಲ್ಲಿ ಸ್ಥಾಪಿತವಾಯಿತು. ೧೯೭೭ರಲ್ಲಿ **'ಶ್ರೀ ಕಾಲಭೈರವೇಶ್ವರ ಸಂಸ್ಕೃತ ವೇದಾಗಮ ಮಹಾವಿದ್ಯಾಲಯ'** ಸ್ಥಾಪಿಸಿ ಗ್ರಾಮೀಣ ಮಕ್ಕಳೂ ಸಂಸ್ಕೃತ ಕಲಿಯಲು ಅವಕಾಶ ಕಲ್ಪಿಸಲಾಗಿದೆ.

**"ನಿಷ್ಠೆಯಿಂ ನಾಗಮಂಗಲದಲ್ಲಿ ಗುರುವರ್ಯ
ಬಿ.ಕಾಮ್ ಮೇಣ್ ಬಿ.ಎ ಪದವಿ ಪ್ರಥಮ ದರ್ಜೆ
ಕಷ್ಟದಿಂ ಕಾಲೇಜ ಸ್ಥಾಪಿಸುತ ಸುಮನದಿಂ
ನಡೆಸುವರು ನೀಡಿ ವಿದ್ಯೆ ಮೇಲ್ದರ್ಜೆ"**

–ಕವಿ, ಆಧುನಿಕ ವಿದ್ಯಾಭ್ಯಾಸದ ಪದವಿ ಹೆಸರುಗಳನ್ನೂ ಬಳಸಿ, ಪದ್ಯ ರಚನೆ ಮಾಡಿರುವುದು ವಿಶೇಷ ಅನುಭವ ನೀಡುತ್ತದೆ.

ಬೆಳ್ಳೂರಿನ 'ಬಾಲಗಂಗಾಧರನಾಥನಗರ' (ಬಿ.ಜಿ ನಗರ)ದಲ್ಲಿ ಸ್ಥಾಪಿತವಾಗಿರುವ ಅತ್ಯಾಧುನಿಕ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ, ವೈದ್ಯಕೀಯ ವಿದ್ಯಾರ್ಥಿಗಳಿಗೆ ಬಹಳಷ್ಟು ಅನುಕೂಲ ಮಾಡಿಕೊಟ್ಟಿದೆ. ಮೇಲುಕೋಟೆಯಲ್ಲಿ **'ಕೈಗಾರಿಕಾ ತರಬೇತಿ ಕೇಂದ್ರ'** ಸ್ಥಾಪಿಸಿ ವೃತ್ತಿಪರ ಜ್ಞಾನ ನೀಡುತ್ತಿದೆ.

ಬೆಂಗಳೂರು ನಗರದಲ್ಲಿ ಸುಮಾರು ಇಪ್ಪತ್ತೊಂಭತ್ತು ಶಿಕ್ಷಣ ಸಂಸ್ಥೆಗಳು ಟ್ರಸ್ಟ್ ವತಿಯಿಂದ ಕೆಲಸ ಮಾಡುತ್ತಿವೆ. ವಿಜಯನಗರ, ಕೆಂಗೇರಿ, ನಿತ್ಯಾನಂದನಗರ (ಕುಂಬಳಗೋಡು), ಆರ್.ಪಿ.ಸಿ. ಬಡಾವಣೆ ಮೊದಲಾದವುಗಳಲ್ಲಿ ಸ್ಥಾಪಿಸಲ್ಪಟ್ಟ ವಿದ್ಯಾ ಕೇಂದ್ರಗಳು ಹಲವು ವಿದ್ಯಾರ್ಥಿಗಳಿಗೆ ಜ್ಞಾನ ದಾಸೋಹ ನೀಡುತ್ತಿವೆ. ವಿಜಯನಗರದಲ್ಲಿರುವ **'ಶ್ರೀಕಾಲಭೈರವೇಶ್ವರ ಆಯುರ್ವೇದ ಕಾಲೇಜು'** ಪ್ರತಿಷ್ಠಿತ ಆಯುರ್ವೇದ ಕಾಲೇಜೆಂದು ಹೆಸರಾಗಿದ್ದು ಕಾಯ ಚಿಕಿತ್ಸೆ, ಪಂಚಕರ್ಮ, ಶಲ್ಯ ತಂತ್ರ, ಪ್ರಸೂತಿ ತಂತ್ರ, ಚರಕ ಸಂಹಿತೆ ಮೊದಲಾದ ಪ್ರಾಚೀನ ಚಿಕಿತ್ಸಾ ತಂತ್ರಗಳನ್ನು ಕಲಿಯಲು ಅವಕಾಶ ಒದಗಿಸಲಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರದಲ್ಲಿ ಅಂಧ ವಿದ್ಯಾರ್ಥಿಗಳಿಗಾಗಿ ವಸತಿ ಶಾಲೆ ನಿರ್ಮಿಸಲಾಗಿದೆ. ಅಂಧ ಮಕ್ಕಳಿಗೆ ಈ ಶಾಲೆ ನಾನಾ ರೀತಿಯ ಅನುಕೂಲಗಳನ್ನು ನೀಡಿದೆ. ಬೆಂಗಳೂರು – ಕನಕಪುರ ರಸ್ತೆಯಲ್ಲಿ **'ಶ್ರೀಕಾಲಭೈರವೇಶ್ವರ ಪಾಲಿಟೆಕ್ನಿಕ್'** ಸ್ಥಾಪಿತವಾಗಿದ್ದು, ಗ್ರಾಮೀಣ ಪ್ರದೇಶದ ಮಕ್ಕಳಿಗೆ ತಾಂತ್ರಿಕ ಜ್ಞಾನ ಪಡೆದುಕೊಳ್ಳಲು ಅವಕಾಶವಾಗಿದೆ. ಕುಂಬಳಗೂಡಿನ ಸಮೀಪ ನಿರ್ಮಿಸಿರುವ **'ಶ್ರೀಬಾಲಗಂಗಾಧರನಾಥ ಅಂತರಾಷ್ಟ್ರೀಯ ವಸತಿ ಶಾಲೆ'** ನಾಲ್ಕು ಅಂತಸ್ತಿನ ಕಟ್ಟಡವಾಗಿದ್ದು ದೇಶವಿದೇಶಗಳಿಂದೆಲ್ಲ ಬಂದ ವಿದ್ಯಾರ್ಥಿಗಳು ಇಲ್ಲಿ ಕಲಿಯುತ್ತಿದ್ದಾರೆ. **"ತೆರೆದರೈ ತಾವ್ ಕೊಡಲು ಶಿಕ್ಷಣವ ಸ್ತ್ರೀಯರಿಗೆ, ಬಿಡದಿಯಲಿ ಬಾಲಿಕಾ ಪ್ರೌಢಶಾಲೆ"** ಎನ್ನುವ ಕವಿ, **"ರಾಮನಗರದಲಿ ನಡೆಸುವರು ಆಸ್ಪತ್ರೆಯನು, ಗುರುವರ್ಯ ಗುರುತರದಿ ರೋಗಿಗಳಿಗೆ .... ಶಿಶ್ರೂಷೆ ನೀಡುವರವರಿಗೆ"** ಎಂದು ಬಾಯ್ತುಂಬಿ, ಮನತುಂಬಿ ಹೊಗಳಿದ್ದಾರೆ.

ಮೈಸೂರು ಜಿಲ್ಲೆಯಲ್ಲಿ ನಾಲ್ಕು ಪೂರ್ವ ಪ್ರಾಥಮಿಕ, ಎರಡು ಪ್ರಾಥಮಿಕ, ಎರಡು ಮಾಧ್ಯಮಿಕ ಎರಡು ಪ್ರೌಢಶಾಲೆಗಳು, ಎರಡು ಸಂಸ್ಕೃತ ಶಾಲೆಗಳು ಹಾಗೂ ಪದವಿ ಪೂರ್ವ ಕಾಲೇಜುಗಳನ್ನು ಸ್ಥಾಪಿಸಲಾಗಿದೆ. ಕುವೆಂಪು ನಗರದಲ್ಲಿರುವ ಬಾಲಜಗತ್ ಮಕ್ಕಳಿಗೆ ಜ್ಞಾನ ಮತ್ತು

ವ್ಯಕ್ತಿತ್ವ ವಿಕಸನಕ್ಕೆ ಬೇಕಾದ ಉತ್ತಮ ಶಿಕ್ಷಣ ನೀಡುತ್ತಿದೆ. ಮಾನಸ ಗಂಗೋತ್ರಿಯ ಬಳಿ ಉತ್ತಮ ಮಟ್ಟದ ವಿದ್ಯಾರ್ಥಿನಿಲಯ ಕಟ್ಟಿಸಲಾಗಿದೆ. ಹೆಗ್ಗಡ ದೇವನ ಕೋಟೆಯ ಕಾಲೇಜು ಆ ಭಾಗದ ವಿದ್ಯಾರ್ಥಿಗಳಿಗೆ ಬಹು ಸಹಾಯಕವೆನಿಸಿದೆ.

ಕೋಲಾರ ಜಿಲ್ಲೆಯ ಮಂಚನಬೆಲೆ, ಚಿಕ್ಕಬಳ್ಳಾಪುರ, ಅಗಲಕುರ್ಕಿ, ಮಾಲೂರು, ಶ್ರೀನಿವಾಸಪುರ, ಮಳೆಕೋಟೆಗಳಲ್ಲಿನ ಶ್ರೀಮಠದ ಶಿಕ್ಷಣ ಸಂಸ್ಥೆಗಳು ಹೆಚ್ಚು ಜನಪ್ರಿಯವೆನಿಸಿವೆ. ಚಿಕ್ಕಬಳ್ಳಾಪುರದಲ್ಲಿ **'ಜಗದ್ಗುರು ಶ್ರೀಚಂದ್ರಶೇಖರನಾಥ ಸ್ವಾಮೀಜಿ ಇಂಜಿನಿಯರಿಂಗ್ ಕಾಲೇಜು'** ತಾಂತ್ರಿಕ ಶಿಕ್ಷಣ ನೀಡುವಲ್ಲಿ ಹೆಗ್ಗಳಿಕೆ ಪಡೆದ ಸಂಸ್ಥೆಯೆನಿಸಿದೆ. ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೇ ಪ್ರತ್ಯೇಕ ವಸತಿನಿಲಯಗಳಿದ್ದು, ಅತ್ಯಾಧುನಿಕ ಸೌಲಭ್ಯ ಪಡೆದುಕೊಂಡಿವೆ. **'ಮ್ಯಾನೇಜ್‌ಮೆಂಟ್ ಕೋರ್ಸ್ ಕಾಲೇಜು'** ಕೂಡ ಇತ್ತೀಚೆಗೆ ಇಲ್ಲಿ ಆರಂಭಗೊಂಡಿದೆ.

ತುಮಕೂರು ಜಿಲ್ಲೆಯಲ್ಲಿನ ತುರುವೇಕೆರೆ, ಮಾಯಸಂದ್ರ, ಕುಣಿಗಲ್, ದಸರಿಘಟ್ಟ, ಸೀಗೇಹಳ್ಳಿ, ಬೈಲಹಳ್ಳಿ ಗೇಟ್, ಆಲ್ದೂರು, ಮಣಿ ಚಂಡೂರುಗಳ ಶಾಲಾ-ಕಾಲೇಜುಗಳು ಉತ್ತಮ ಮಟ್ಟದ ಶಿಕ್ಷಣ ನೀಡುತ್ತಿವೆ.

**"ಕೊಡುತಿಹರು ಕಾಂಪ್ಯೂಟ್ರ ಷಾಡ್ಗುಣ್ಯ ಶಿಕ್ಷಣವ<br>ತರುಣಿ ಮೇಣ್ ತರುಣರಿಗೆ ಶಾಲೆಗಳಲಿ<br>ಪಡೆಯುವರು ಪ್ರಜ್ಞಾನ ವೃದ್ಧಿಪುದು ವಿಜ್ಞಾನ<br>ತೀವ್ರ ತಂತ್ರಜ್ಞಾನ ಕಲಿಯುವರಲಿ"**

ಮಾಯಸಂದ್ರದ **'ಕಲ್ಪತರು ಆಶ್ರಮ'**ದಲ್ಲಿ ನಡೆಸುತ್ತಿರುವ ಸಂಸ್ಕೃತ ಶಾಲೆ ಋಷಿಗಳ ಆಶ್ರಮವನ್ನು ನೆನೆಪಿಸುವಂತಿದೆ. ಇಲ್ಲಿನ ಬಾಲಿಕಾ ಪ್ರೌಢಶಾಲೆ, ಮಣಿ ಚಂಡೂರಿನ ಪ್ರೌಢಶಾಲೆ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಇಂಬು ನೀಡಿವೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಆರು ಪ್ರಾಥಮಿಕ, ಎರಡು ಮಾಧ್ಯಮಿಕ, ನಾಲ್ಕು ಪ್ರೌಢಶಾಲೆ, ಒಂದು ಪದವಿ ಪೂರ್ವ ಕಾಲೇಜು, ಎರಡು ಸಂಸ್ಕೃತ ಶಾಲೆಗಳು, ಒಂದು ಪಾಲಿಟೆಕ್ನಿಕ್, ಒಂದು ಇಂಜಿನಿಯರಿಂಗ್ ಕಾಲೇಜು ಶ್ರೀಮಠದಿಂದ ಸ್ಥಾಪಿತವಾಗಿದ್ದು ಸಾವಿರಾರು ಸಂಖ್ಯೆಯ ವಿದ್ಯಾರ್ಥಿಗಳಿಗೆ ಅನುಕೂಲ ಒದಗಿಸಿದೆ.

–ಹೀಗೆ ಚಿತ್ರದುರ್ಗ, ಹಾಸನ, ಕೊಡಗು, ಧಾರವಾಡ ಜಿಲ್ಲೆಗಳಲ್ಲಿಯೂ ನಾನಾ ವಿಧದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿರುವ ಶ್ರೀಬಾಲಗಂಗಾಧರರು ಒಬ್ಬ ವ್ಯಕ್ತಿ ಅಲ್ಲ; ಶಕ್ತಿ ಎನ್ನುವುದನ್ನು ನಿರೂಪಿಸಿದ್ದಾರೆ. ತಮಿಳುನಾಡಿನ ಮಧುರೈ ಜಿಲ್ಲೆಯ ಕಂಬಂನಲ್ಲಿ **'ಶ್ರೀಬಾಲಗಂಗಾಧರನಾಥ ಸ್ವಾಮೀಜಿ ಮಹಿಳಾ ಪ್ರಥಮ ದರ್ಜೆ ಕಾಲೇಜು'** ಸ್ಥಾಪಿಸಿ ಸಾವಿರಾರು ವಿದ್ಯಾರ್ಥಿನಿಯರ ವಿದ್ಯಾದಾಹ ತಣಿಸಿದ್ದಾರೆ.

ಶ್ರೀಮಠದಿಂದ ಸ್ಥಾಪಿತವಾದ ಶಿಕ್ಷಣ ಸಂಸ್ಥೆಗಳಲ್ಲಿ ಬಹುತೇಕ ಹಿಂದುಳಿದ ಗ್ರಾಮೀಣ ಪ್ರದೇಶಗಳಲ್ಲೇ ಹೆಚ್ಚು ನೆಲೆನಿಂತಿವೆ. ಹಿಂದುಳಿದವರಿಗೆ, ದೀನ ದಲಿತರಿಗೆ ಉಚಿತ ಶಿಕ್ಷಣ, ಊಟ,

ವಸತಿಗಳನ್ನು ನೀಡುವಲ್ಲಿ ಸಂಸ್ಥೆ ಮುಂದಾಗಿದೆ. ಅಂಧ, ಅಂಗವಿಕಲ, ಅನಾಥ ಮಕ್ಕಳಿಗೆ ಊಟ, ವಸತಿ ನೀಡಿ ಶಿಕ್ಷಣ ನೀಡುವ ಉದಾರ ಪ್ರವೃತ್ತಿ ಶ್ರೀಮಠಕ್ಕಿದೆ. ಶಿಕ್ಷಣದ ಜೊತೆಜೊತೆಗೆ ಧರ್ಮ, ನಾಡು-ನುಡಿ, ಸಂಸ್ಕೃತಿ, ಯೋಗ, ಧ್ಯಾನ ಮೊದಲಾದ ನೈತಿಕ ಶಿಕ್ಷಣ ನೀಡುವಲ್ಲಿ ಶಿಕ್ಷಣ ಸಂಸ್ಥೆಗಳು ಉತ್ಸಾಹ ತೋರಿವೆ. ನಗರಗಳ ಹೊಗೆ-ಧೂಳು-ಕಲುಷಿತ ಪರಿಸರದಿಂದ ಮುಕ್ತವಾಗಿ ದೂರದ ಹಳ್ಳಿಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿರುವುದು, ಬಾಲಗಂಗಾಧರರ ಪ್ರಕೃತಿ ಪ್ರೇಮ ಮತ್ತು ಶಿಕ್ಷಣ ಪ್ರೇಮ ಎರಡಕ್ಕೂ ಕನ್ನಡಿ ಹಿಡಿದಂತಿದೆ. ಒಮ್ಮೆ **ರಾಷ್ಟ್ರಪತಿ ಅಬ್ದುಲ್ ಕಲಾಂ**ರವರು ಆದಿಚುಂಚನಗಿರಿಗೆ ಭೇಟಿಯಿತ್ತ ಸನ್ನಿವೇಶವನ್ನು ಉತ್ಸಾಹದಿಂದ ಬಣ್ಣಿಸುವ ಹನುಮೇಗೌಡರು,

**"ಗುರು ಬಾಲಗಂಗಾಧರರ ಸಾಧನೆಗಳನ್ನು**
**ಸಾದರದಿ ರಾಷ್ಟ್ರಪತಿ ಶ್ಲಾಘಿಸಿದರು**
**ಸುಮನದಿಂ ಸತ್ಕರಿಸಿ ಕೊಂಡಾಡಿ ಕಲಾಮರ**
**ಗುರುದೇವ ಗೌರವದಿ ಬೀಳ್ಕೊಟ್ಟರು"**

ಎನ್ನುತ್ತ **"ಸುಗುಣಗಳ ಸಾಗರವೆ ಸಂಸ್ಕೃತಿಯ ಸಾಮ್ರಾಟ, ಚುಂಚಾದ್ರಿ ಚಂದ್ರ ನೀವ್ ಅಜರಾಮರ"** ಎಂದು ಭಾವೋನ್ಮಾದದಿಂದ ನುಡಿಯುತ್ತಾರೆ. ಸ್ವಾಮೀಜಿಗಳ ಧಾರ್ಮಿಕ ಆಚರಣೆಗಳು ಏನೇ ಇರಲಿ, ಅವರು ಶಿಕ್ಷಣ ಕ್ಷೇತ್ರಕ್ಕೆ ನೀಡುತ್ತಿರುವ ಅಪಾರ ಕೊಡುಗೆಯನ್ನು ಮಾತ್ರ ಯಾರೇ ಆದರೂ ಗುರುತಿಸಬೇಕಾದ್ದು ನ್ಯಾಯೋಚಿತವೆನಿಸುತ್ತದೆ.

ಶ್ರೀ ಬಾಲಗಂಗಾಧರರ ಬಗ್ಗೆ ಇಲ್ಲಿ ಬಂದಿರುವ ಮಾತುಗಳನ್ನು ಮರು ಪರಿಶೀಲಿಸುವ ಅಗತ್ಯವಿಲ್ಲ. **'ಚುಂಚಾದ್ರಿ ಚಂದ್ರಿಕೆ'** ಮೂಲತಃ ಆರಾಧನೆ ನೆಲೆಯಲ್ಲಿ ಹುಟ್ಟಿಕೊಂಡ ಧಾರ್ಮಿಕ ಕಾವ್ಯವಾದ್ದರಿಂದ, ಕವಿಯ ಮೆಚ್ಚು ನುಡಿಯ ಹಿಂದಿನ ಭಕ್ತಿ ಶ್ರದ್ಧೆಗಳನ್ನು ಗುರುತಿಸಬೇಕಾಗುತ್ತದೆಯೇ ಹೊರತು ಹಾಗೆ ಹೇಳಿರುವುದು ಎಷ್ಟರ ಮಟ್ಟಿಗೆ ಸರಿ? ಎನ್ನುವ ಪ್ರಶ್ನೆಗೆ ಉತ್ತರ ಹುಡುಕುವುದು ವೃಥಾ ಆಲಪಪಾಗುತ್ತದೆ. ಬಾಲಗಂಗಾಧರರ ಒಟ್ಟಾರೆ ಸಾಧನೆ ಗಮನಿಸಿದಾಗ, ಬಹುಶಃ ಉಳಿದ ನಾಥ ಮುನಿಗಳಾರೂ ಸಾಧಿಸದ ಸಾಧನೆ ಅವರದ್ದಾಗಿದೆ ಎನ್ನುವುದಕ್ಕೆ ಕಣ್ಣಮುಂದೆಯೇ ಸಾಕ್ಷಿಗಳಿವೆ. ಅವರ ಕರ್ತವ್ಯ ನಿಷ್ಠತೆಯನ್ನು ಬಹು ಹತ್ತಿರದಿಂದ ಕಂಡ ಯಾರೇ ಆದರೂ ಅವರ ಬಗ್ಗೆ, ಅವರ ಸಾಧನೆ ಬಗ್ಗೆ ಮೆಚ್ಚುಗೆಯ ಮಾತನಾಡುವುದು ಸಹಜವೇ ಸರಿ. ಅದರಲ್ಲೂ ಹನುಮೇಗೌಡರು ಕವಿಯಾಗಿರುವುದರಿಂದ, ಶ್ರೀ ಬಾಲಗಂಗಾಧರರನ್ನು ಸರಿಯಾಗಿಯೇ ಅರ್ಥೈಸಿಕೊಂಡಿದ್ದಾರೆ ಎನ್ನುವುದು ದಿಟ. ಒಂದು ಜನಾಂಗಕ್ಕೆ ಪ್ರೇರಣೆಯನ್ನು ನೀಡ ಬಲ್ಲ ಶಕ್ತಿ ಬಾಲಗಂಗಾಧರರಿಗಿರುವುದರಿಂದ ಅವರ ಬಗೆಗಿನ ಎಲ್ಲ ಹೊಗಳಿಕೆ ಮಾತುಗಳೂ ಉತ್ಪ್ರೇಕ್ಷೆ ಎನಿಸಲಾರವು.

## ಕಾವ್ಯ ಸೌಂದರ್ಯ

**'ಚುಂಚಾದ್ರಿ ಚಂದ್ರಿಕೆ'** ಪ್ರಕೃತಿ ಸೌಂದರ್ಯವನ್ನು ವರ್ಣಿಸುವಾಗ, ನೀತಿ ನಿರೂಪಣೆ ಮಾಡುವಾಗ ಭಾವತೊರೆಯಲ್ಲಿ ಮಿಂದೇಳುತ್ತದೆ. ತೀವ್ರ ಭಾವಜೀವಿಯಾದ ಹನುಮೇಗೌಡರು ಹೆಜ್ಜೆ ಹೆಜ್ಜೆಗೂ ಉಪಮಾನ, ಉಪಮೇಯಗಳೊಡನೆ ಮಾತನಾಡುತ್ತಾರೆ. ಪ್ರತಿಮೆಗಳನ್ನು ಮೇಲಿಂದ ಮೇಲೆ ತರುವ ಕವಿ, ಸಂದರ್ಭದ, ಸನ್ನಿವೇಶದ ಯಥಾವತ್ತು ನಿರೂಪಣೆಗೆ ಸಾಕ್ಷಿಯಾಗುತ್ತಾರೆ. ಹೀಗೆ ಹೋಲಿಕೆಯ ಸರಮಾಲೆಯೇ ಕಾವ್ಯವಾದಾಗ ಕಾವ್ಯಾಸ್ವಾದನ ರುಚಿಗಟ್ಟುತ್ತದೆ; ಕವಿಯ ಬಗ್ಗೆ ಗೌರವದ ಭಾವನೆ ಮೂಡುತ್ತದೆ. ಈ ವಿಚಾರದಲ್ಲಿ ಹನುಮೇಗೌಡರು ಓದುಗರನ್ನು ಗೆದ್ದು ಬಿಡುತ್ತಾರೆ.

ದೇವಲೋಕದ ಅಧಿಪತ್ಯಕ್ಕಾಗಿ ಬ್ರಹ್ಮ-ವಿಷ್ಣುಗಳ ನಡುವೆ ಯುದ್ಧವಾಗುತ್ತದೆ. ಯುದ್ಧದ ಪರಿಣಾಮ ಉಳಿದ ದೇವತೆಗಳಿಗೆ ನಷ್ಟ ಉಂಟು ಮಾಡಿದ್ದರಿಂದ, ಅವರೆಲ್ಲ ತಮ್ಮ ಕಷ್ಟ ಪರಿಹಾರಕ್ಕೆ ಈಶ್ವರನನ್ನು ಪ್ರಾರ್ಥಿಸುತ್ತಾರೆ. ಆ ಪ್ರಾರ್ಥನೆಯ ಸಂದರ್ಭದಲ್ಲಿ ಈಶ್ವರನ ವೇಷ-ಭೂಷಣಗಳನ್ನು ವರ್ಣಿಸುವ ಪದ್ಯವೊಂದು ಮನಸೆಳೆಯುತ್ತದೆ.

**"ಬಾಳದಲಿ ಬಡಬಾಗ್ನಿ ಭುಜಗಳಲಿ ಭುಜಗಗಳು**
**ಜಟೆಯಲ್ಲಿ ಜಾಹ್ನವಿಯು ಭೂತನಾಥ**
**ಕಾಳ ವಿಷ ಕೊರಳಲ್ಲಿ ಕಟಿಯಲ್ಲಿ ಕರಿಯಜಿನ**
**ಶಿಖೆಯಲ್ಲಿ ಸೌಮ್ಯ ಶಶಿ ವಿಶ್ವನಾಥ"**

ಬ್ರಹ್ಮ-ವಿಷ್ಣುಗಳಿಗೆ ಸರಿಯಾದ ಪಾಠ ಕಲಿಸಿದ ಈಶ್ವರ, ತಪಸ್ಸಿಗಾಗಿ ಚುಂಚಾದ್ರಿಗೆ ಬರುತ್ತಾನೆ. ಅಲ್ಲಿನ ಸೌಂದರ್ಯ, ಮಾತಿಗೆ ಸಿಲುಕದೇನೋ ಎನ್ನುವಂತೆ ಮೇಲಿಂದ ಮೇಲೆ ಕವಿ, ವರ್ಣನೆ ತರುತ್ತಾರೆ:

**"ಬೆಳ್ಳಕ್ಕಿ ಬಾನಿನಲಿ ಬಿಲ್ಲಂತೆ ಬಾಗುತ್ತ**
**ಸಾಗುತಿವೆ ಸಾಲಾಗಿ ಚುಂಚಾದ್ರಿಗೆ**
**ಮುಳುಗುತಿರೆ ಮಾರ್ತಾಂಡ ಮರಿಗಳಿಗೆ ಮೇವುಣಿಸೆ**
**ಹಕ್ಕಿಗಳು ಹೋಗುತಿವೆ ನೀಡಗಳಿಗೆ"**

**"ಚಿಮ್ಮುತಿದೆ ಚಂದನವು ಸಮೀರಕೆ ಸುಗಂಧವ**
**ಚೆಲ್ಲುತಿದೆ ಚಿಗುರೆಲೆಗಳಚ್ಚ ಹಸಿರ**
**ಹೊಮ್ಮುತಿದೆ ಹೊಸತನದ ಸೌಂದರ್ಯ ಸುಧೆಯ ಝರಿ**
**ತಕ್ಕೊರ್ಮೆ ತಪೋವನ ಅತಿ ಸುಂದರ"**

ಚುಂಚಾದ್ರಿಯ ಬಳಿಯಲ್ಲಿ ವಾಸವಿದ್ದ ಚುಂಚ-ಕಂಚ ರಕ್ಕಸರುಗಳು ಮಹಿಳೆಯರನ್ನು ಯಾವ ರೀತಿ ಹಿಂಸಿಸಿದರೆನ್ನುವುದನ್ನು ಕವಿ ಹೀಗೆ ವರ್ಣಿಸುತ್ತಾರೆ:

**"ದನುಕುಲಜ ದುರ್ಜನರು ಸುರೆ ಕುಡಿದು ಸವಿದರೈ
ಮಹಿಳೆಯರ ಮೈಸಿರಿಯ ಮದೋತ್ಸವದಿ
ಧನ, ಕನಕ, ಧುರಂಧರಿಗಳದೋಚಿ ಗುಡುಗಿದರು
ಬೀಗುತ್ತ ಬಂಡುಂಡ ದುಂಬಿ ತೆರದಿ"**

ಚುಂಚ-ಕಂಚ ಸಹೋದರರನ್ನು ಶಿವ ದಮನ ಮಾಡಲೆತ್ನಿಸುವ ಸಂದರ್ಭ ಕೂಡ ಮನೋಹರವಾಗಿ ವರ್ಣಿತವಾಗಿದೆ. ರಕ್ಕಸರು ಶಿವನನ್ನು ಮುತ್ತುವ ರೀತಿ ಹೇಗೆಂದರೆ,

**"ರಕ್ಕಸರು ರಣದಲ್ಲಿ ಬಾಣಗಳ ಬಿಟ್ಟರೈ
ಶೂಲಿಯನು ಸೋಲಿಸಲು ಮಿಂಚಿನಂತೆ
ಸೊಕ್ಕಿನಿಂ ಸೆಣಸಿದರು ಮುತ್ತಿದರು ಮೃಡನನ್ನು
ಚಿಟ್ಟೆಗಳು ಚಿತೆಯನ್ನು ಮುತ್ತುವಂತೆ"**

ಆಗ ಕುಪಿತಗೊಂಡ ಈಶ್ವರನ ಮನಸ್ಸು "ಬೆಂಕಿಯಿಂ ಬೆಣ್ಣೆ ತಾ ಕುದಿಯುವಂತೆ" ಕುದಿಯಿತೆಂದು ಕವಿ ವರ್ಣಿಸುತ್ತಾರೆ. ಹಾಗೆಯೇ ರಕ್ಕಸರನ್ನು ಶಿವ ಸದೆ ಬಡಿದಾಗ "ಕಳೇಬರ ಕಂಡವೈ ಬೆಟ್ಟದಂತೆ" ಎನ್ನುವಲ್ಲಿ ಯುದ್ಧದ ಭಯಾನಕತೆ ವೇದ್ಯವಾಗುತ್ತದೆ.

ಚುಂಚಾದ್ರಿಗೆ ಸಂಬಂಧ ಪಟ್ಟ ಎಲ್ಲವುಗಳೂ ಶಿವನಿಗೆ ಸೇರಿದುವಂಥವು ಎನ್ನುವುದನ್ನು ಗಾಢವಾಗಿ ನಂಬಿದ್ದಾರೆ:

**"ಕೋಗಿಲೆಯ ಕಂಠೋಕ್ತ ಸುಶ್ರಾವ್ಯ ಸವಿಗಾನ
ಹೆಬ್ಬುಲಿಯ ಹೂಂಕಾರ ಅವನವುಗಳೆ
ನಾಗಗಳ ನುಲಿದಾಟ ಹಕ್ಕಿಗಳ ಹಾರಾಟ
ನವಿಲುಗಳ ನರ್ತನವು ಅವನವುಗಳೆ"**

ದೇವರನ್ನು ನಂಬುವ, ಆಸ್ತಿಕ ಮನೋಭಾವದ ಅಗತ್ಯತೆಯನ್ನು ಬೆಂಬಲಿಸುವ ಕವಿ-

**"ಭಕ್ತಿಯಿಂ ಭಜಿಸುವುದು, ಆತ್ಮಗಳ ಅಭ್ಯುದಯ
ಶಾಂತಿಮಯ ಸಹಬಾಳ್ವೆ, ನರಗೆ ಬೇಕು
ಭಕ್ತಿಯನು ಬದಿಗೊತ್ತಿ ಧರ್ಮವನು ದೇವರನು
ದ್ವೇಷಿಸುತ ದೂಷಿಪುದು ನರಗೆ ಸಾಕು"**

ಎಂದಿದ್ದಾರೆ. ಹರಿ-ಅಜರು, ಹರ-ಸುರರು, ಮುನಿಜನ-ಮಾನವರು ಬೇರೆಂದು ಭಾವಿಸುವುದು ತಪ್ಪಲ್ಲವೇ ಎನ್ನುವ ಕವಿ, ಹರಿಯಲ್ಲಿ ಹರನಲ್ಲಿ ದೇವನರ ದೈತ್ಯರಲಿ ಸಂಚರಿಪ ಶಕ್ತಿಯದು ಒಂದಲ್ಲವೆ? ಎಂದು ಪ್ರಶ್ನಿಸಿದ್ದಾರೆ. ಎಲ್ಲರಲ್ಲೂ ಹರಿಯುವ ಮೂಲಶಕ್ತಿ ಒಂದೇ ಎನ್ನುವ ಭಾವನೆ ಕವಿಗಿದೆ. ಹೀಗಾಗಿ ನಮ್ಮ ನಮ್ಮಲ್ಲೇ ಭೇದ-ಭಾವ ಅನಗತ್ಯ ಎನ್ನುವುದು ಅವರ ಅಭಿಪ್ರಾಯವಾಗಿದೆ.

ಆತ್ಮಕ್ಕೆ ಸಾವಿಲ್ಲ. ಅದು ಬೇರೆ ಬೇರೆ ದೇಹಗಳೊಂದಿಗೆ ಅಂಟಿಕೊಳ್ಳುತ್ತ ಜೀವಿಸುವುದರಿಂದ, ಚಿರಾಯು ಎಂದು ಕವಿ ಭಾವಿಸಿ ಬರೆದ ಪದ್ಯ ಹೀಗಿದೆ:

**"ಸುತ್ತುತಿಹ ಸೂರ್ಯ ಜಗ ಮುದದಿಂದ ಮುಳುಗುತ್ತ**
**ಹುಟ್ಟುವನು ಹೊಸತನದಿ ಇನ್ನೊಂದೆಡೆ**
**ಆತ್ಮವೂ ಅಂತೆಯೇ ತ್ಯಜಿಸುತ್ತ ತನುವೊಂದ**
**ಧರಿಸುವುದು ದೇಹವನು ಮತ್ತೊಂದೆಡೆ"**

–ಹುಟ್ಟಿನಲಿ ಸಾವಿನಲಿ ಸುಖನಿದ್ರೆಯಿದೆ; ಸಾವಿನಲ್ಲಿ ಮರುಜನ್ಮವಿದೆ. ಹದಮಾಡಿ ಹೃದಯವನ್ನು, ಭಕ್ತಿಯನ್ನು ದೇವನಲ್ಲಿ ಹುಟ್ಟುವಂತೆ ಮಾಡಿಕೊಂಡರೆ, ಅಮರತ್ವವು ಸಿದ್ಧಿಸುವುದೆಂದು ಕವಿ ಬೋಧಿಸುತ್ತಾರೆ. ಧಾರ್ಮಿಕ ಕಾವ್ಯದ ಎಲ್ಲ ಲಕ್ಷಣ ಪಡೆದಿರುವ ಈ ಕಾವ್ಯದಲ್ಲಿ, ಈ ರೀತಿಯ ಸಾತ್ವಿಕ ವಿಚಾರಗಳ ಒಲವು ಸಹಜವೆನಿಸುತ್ತದೆ.

**"ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ"** ಎನ್ನುವ ಗಾದೆ ಮಾತಿನಂತೆ ಒಳ್ಳೆಯ ಜನರ ಒಡನಾಟ, ಒಳ್ಳೆಯದನ್ನೇ ಮಾಡಿಸುತ್ತದೆ; ಕೆಟ್ಟ ಜನರ ಸಹವಾಸ, ಕೆಟ್ಟ ಕೃತ್ಯಗಳಿಗೇ ಕಾರಣವಾಗುತ್ತದೆ. ಇದನ್ನು ಕವಿ ಹೇಳುವುದು ಹೀಗೆ:

**"ಸಜ್ಜನರ ಸಹವಾಸ ಸಾಧುಗಳ ಸಂಪರ್ಕ**
**ಸಗ್ಗಕ್ಕೆ ಸನ್ಮಾರ್ಗ ತೋರುತಿಹವು**
**ದುರ್ಜನರ ದುಷ್ಕೃತ್ಯ ಕೆಟ್ಟವರ ಕೊಲೆ ಕೃತ್ಯ**
**ನಿರಂತರ ನಿರಘರನು ನೋಯಿಸುವುವು"**

ಸಾವು, ಯಾರನ್ನೂ ಬಿಡದು, ಸಾವಿಗೆ ಪಕ್ಷಪಾತವಿಲ್ಲ; ಅದು ಎಲ್ಲರಿಗೂ ಅನ್ವಯಿಸುವ ನಿಯಮ. ಆದರೆ ಮನುಷ್ಯ ಈ ಸತ್ಯವನ್ನು ತಿಳಿದೂ ಕೂಡ, ತನ್ನದೇ ಲೋಕದಲ್ಲಿ ಮೈಮರೆಯುತ್ತಾನೆ. ಇದನ್ನು ವಿವರಿಸುತ್ತಾ ಕವಿ ಹೀಗೆ ಹೇಳುತ್ತಾರೆ.

**"ಬಗಲಲ್ಲಿ ಬೆಂಬಿಡದೆ ಮೆರೆಯುತಿಹ ಮೃತ್ಯುವದು**
**ಕೈ ಚಾಚಿ ಕರೆಯುತಿದೆ ಕೇಕೆ ಹಾಕಿ**
**ಸಾಗುವೆವು ಸಾವಿನೆಡೆ ಅಂದವಹ ಅರಮನೆಯ**
**ಬಂಗಾರ, ಬೆಳ್ಳಿಯನು, ಅತ್ತನೂಕಿ"**

ಮನುಷ್ಯ ಇರುವಷ್ಟು ದಿನ ಮಾತ್ರ! ಸತ್ತಾಗ ಆತ ಏನೇನೂ ಅಲ್ಲ. ಆತ ದುಡಿದದ್ದು, ಸಂಪತ್ತು ಎಲ್ಲವನ್ನೂ ಬಿಟ್ಟು ಬಹುದೂರ ಹೋಗಬೇಕಾಗುತ್ತದೆ. ಇದು ಕಟು ಸತ್ಯ! ಯಾರೇ ಆಗಲಿ ಜೀವನದಲ್ಲಿ ಒಮ್ಮೆ ಅನುಭವಿಸಲೇ ಬೇಕಾಗುತ್ತದೆ. –ಇದನ್ನು ಬಹು ಸೊಗಸಾಗಿ ಹನುಮೇಗೌಡರು ವರ್ಣಿಸುತ್ತಾರೆ:

"ಸತ್ತಾಗ ಸಖನಂತೆ ಧನಧಾನ್ಯದೈಶ್ವರ್ಯ
ವೈಢೂರ್ಯ ವಜ್ರಾದಿ ಜೊತೆ ಬರುವುವೆ?
ಸುತ್ತಲಿಹ ಸಂಪತ್ತು ಸೊಗಸಾದ ಸದನಗಳು
ಇದ್ದಲ್ಲೆ ಇರುವುದನು ಅರಿತಿಲ್ಲವೆ?

ದೇಹ ನಶ್ವರವಾದಂಥದ್ದು; ಮೇಲ್ನೋಟಕ್ಕೆ ಚರ್ಮ ಹೊದ್ದು ಅದು ಸುಂದರವಾಗಿ ಕಾಣಬಹುದು. ಆದರೆ ದೇಹದೊಳಗೆ ಎಲುಬು, ಮಲ ಮೂತ್ರವೇ ತುಂಬಿರುವುದನ್ನು ಕವಿ ಹೇಳುವ ಮೂಲಕ ಆತ್ಮಜ್ಞಾನಕ್ಕೆ ಪ್ರಾಶಸ್ತ್ಯ ನೀಡುತ್ತಾರೆ:

**"ಸುಂದರದ ಶರೀರವು ಮಾಂಸದಾ ಮುದ್ದೆಯಿದು**
**ಎಲುಬುಗಳು ಎಲ್ಲೆಡೆಯು ಕಾಣುತಿಹವು**
**ಚಂದವಿಹ ಚರ್ಮವದು ಮೈಯನ್ನು ಮುಚ್ಚಿಹುದು**
**ಮೈಯೊಳಿಹ ಮಲ ಮೂತ್ರ ಹೊಲಸು ಮಯವು".**

**"ಜೀವಾತ್ಮ ಜಡದೇಹ ಬಿಸುಡುತ್ತ ಬೇರೊಂದು**
**ದೇಹವನು ಧರಿಸುತ್ತ ಸಾಗುತಿಹನು**
**ಶವವನ್ನು ಶೃಂಗರಿಸಿ ಮಣ್ಣಿನಲಿ ಮುಚ್ಚುವರು**
**ಮಾನವನು ಮರಣವನು ಮರೆತಿರುವನು"**

ಅರಿಷಡ್ವರ್ಗಗಳು ಮನುಷ್ಯನನ್ನು ನಾನಾ ರೀತಿಯಲ್ಲಿ ಕಾಡುತ್ತಿರುತ್ತವೆ. ಅವುಗಳ ಕಾಟವನ್ನು ಸಹಿಸಿಕೊಳ್ಳುವ ಮನುಷ್ಯ, ಮತ್ತೆ ಮತ್ತೆ ಅವುಗಳ ಬಂಧನಕ್ಕೆ ಸಿಲುಕಿಕೊಳ್ಳುತ್ತಲೇ ಇರುತ್ತಾನೆ. ಹೀಗೆ ಸಿಲುಕಿಕೊಳ್ಳುವುದೇ 'ಬದುಕು' ಎಂದು ಆತ ಭಾವಿಸಿರುತ್ತಾನೆ. ಈ ವಿಚಾರವಾಗಿ ಕವಿ ಏನು ಹೇಳುತ್ತಾರೆಂದರೆ:

**"ಮಲಿನವಹ ಮಾನಸವು, ಮಮಕಾರ ಮಾತ್ಸರ್ಯ**
**ಕ್ರೋಧ ಭಯ ಕಾಮಾದಿಗಳಾಗರವು**
**ಮನಸಿನಲಿ ಮೆರೆಯಲ್ಕೆ ಅನಂತದ ಆನಂದ**
**ಹೊಮ್ಮುತ್ತ ಹರಿಯುತ್ತ ಅನವರತವು"**

ಪರತತ್ವ, ಮನುಷ್ಯನಿಗೆ ಇಹಲೋಕದ ಮಿತಿಗಳನ್ನು ದಾಟಲು ದಾರಿ ತೋರುತ್ತದೆ. ಅಲ್ಲಿ ಪ್ರೇಮದ, ಕರುಣೆಯ, ಸ್ನೇಹ ಭಾವನೆಯ ಮಿಂಚು ಕಂಡು ಮನಸ್ಸು ಹಗುರಾಗುತ್ತದೆ; ಬದುಕಿನ ಒತ್ತಡ ನೀಗುತ್ತದೆ. ಬದುಕಿನ ಮೂಲದ ಕಡೆ ಮನಸ್ಸು ವಾಲುವುದರಿಂದ ಚಿತ್ರ-ವಿಚಿತ್ರ ಭಾವನೆಗಳು ಮೂಡಿ ಕುತೂಹಲ ಉಂಟಾಗುತ್ತದೆ. - ಹೀಗೆ ಪರತತ್ವ ವಿಚಾರದ ಪಾರಮ್ಯವನ್ನು ಕವಿ ವರ್ಣಿಸುತ್ತಾರೆ:

**"ಕಾರುಣ್ಯ ಕಿರಣಗಳು ಕಾಣುವುವು ಕುರುಡನಿಗೆ**
**ಭವ್ಯದಯೆ ಬಾಷೆಯಲಿ ಬರೆಯುತಿರಲು**
**ಕರುಣಮಯ ಕಿರುನುಡಿಯು ಕಿವುಡನಿಗೆ ಕೇಳುವುದು**
**ಪ್ರೇಮಮಯ ಪರಮ ಕಥೆ ಪಾಡುತಿರಲು"**

ರೇಷ್ಮೆಯ ಹುಳು ತನ್ನ ನೂಲನ್ನು ತಾನೇ ಸುತ್ತಿಕೊಂಡು ತಾನೇ ಸಾವನ್ನು ತಂದುಕೊಳ್ಳುವಂತೆ, ಮನುಷ್ಯ ಕೂಡ ಮದ-ಮತ್ಸರ ಕಾಮ ಮಮಕಾರಗಳಿಂದೊಡಗೂಡಿ, ದೇವರನ್ನೇ ಮರೆತು ನಾಶವಾಗುತ್ತಾನೆ. ಈ ಹೋಲಿಕೆ ಬಹುವಾಗಿ ಆಕರ್ಷಿಸುತ್ತದೆ:

**"ರಂಜಿಸುವ ರೇಷ್ಮೆಯನು ಸೃಜಿಸಿ ಹುಳು ಶೇಖರಿಸೆ**
**ನೇಣಾಯ್ತು ನಿರ್ಮಿಸಿದ ರೇಷ್ಮೆ ನೂಲು**
**ನಂಜಾಯ್ತು ನರಕುಲಕೆ ಮದ ಕಾಮ ಮಮಕಾರ**
**ಶರ್ವಾಣಿ ಶಿವ ಕೃಪೆಯು ಇಲ್ಲದಿರಲು"**

–ಇದರಲ್ಲಿ ಲೇಖಕರ ವ್ಯುತ್ಪತ್ತಿ ಎಂದರೆ ಪ್ರಾಚೀನ ಭಕ್ತಿಸಾಹಿತ್ಯದ, ವಚನ ಸಾಹಿತ್ಯದ ಅಧ್ಯಯನದಿಂದ ದೊರೆತ ಜ್ಞಾನ ವ್ಯಕ್ತವಾಗುತ್ತದೆ.

**"ಕಮನೀಯ ಕಾವೇರಿ ಹರಿವ ನಾಡು"** ಎಂಬ ಸಂಚಿಕೆಯಲ್ಲಿ **'ಚುಂಚನಗಿರಿ'**ಯ ಅಮೋಘ ಸೌಂದರ್ಯವನ್ನು ಕವಿ ಹನುಮೇಗೌಡರು ಮನದುಂಬಿ ವರ್ಣಿಸುತ್ತಾರೆ. ಚುಂಚನಗಿರಿಯ ಸೌಂದರ್ಯ ವರ್ಣನೆ, ಈ ಕೃತಿಯ ರಸಘಟ್ಟಗಳಲ್ಲಿ ಒಂದು, ಚುಂಚನಗಿರಿಯ ಚೆಲುವನ್ನು ಅತ್ಯಂತ ಆತ್ಮೀಯವಾಗಿ ಆಸ್ವಾದಿಸುವ ಕವಿ, ಅಷ್ಟೇ ನುರಿತವಾದ ಭಾಷೆಯನ್ನು ಬಳಸಿ ಅದನ್ನು ವರ್ಣಿಸಿದ್ದಾರೆ:

**"ರಸ ಋಷಿಯ ರಮ್ಯ ನೆಲೆ ಯತಿವರರ ಯೋಗ ನೆಲೆ**
**ಕಮನೀಯ ಕಾವೇರಿ ಹರಿವ ನಾಡು**
**ಈಶನಿಗೆ ಇಲ್ಲಿತ್ತು ತೇಜಮಯ ತಪಗೈಯೆ**
**ಚೊಕ್ಕಳದ ಚುಂಚನಾ ಕಟ್ಟೆ ಬೀಡು"**

**"ಚಲ್ಲಿತ್ತು ಚಂದ್ರಮನ ಚಂದ್ರಿಕೆಯು ಚಕಚಕಿಸಿ**
**ತಂಪಾದ ತೆಳುಗಾಳಿ ಸುಳಿಯಿತಲ್ಲಿ**
**ಮಲಗಿದವು ಮೈಮರೆತು ಮಲೆಸಾಲು ಮೇಡುಗಳು**
**ಬನವೆಲ್ಲ ಬೆಳದಿಂಗಳಿನ ಸುಧೆಯಲಿ"**

**"ಕರೆಯುತಿರೆ ಕೋಗಿಲೆಯು ಕಮನೀಯ ಕಂಠದಿಂ**
**ವಸುಧೆಯಲಿ ವಸಂತದ ಚೇತನವನು**
**ಕರಿ ಹರಿಣಿ ಕೇಸರಿಯು ಮತ್ಸರವ ಮರೆತಿಹವು**
**ಸಂತಸದಿ ಸಲ್ಲಿಸುತ ಸೇವೆಯನ್ನು"**

**"ಬಳುಕುತಿಹ ಬಳ್ಳಿಗಳು ನರ್ತಿಸುತ ನಿಂತಿಹುವು**
**ನಾಟ್ಯ ಕಲೆ ನಿವೇದಿಸೆ ನಟರಾಜಗೆ**
**ತಳಿರಿನಿಂ ತಂಗಾಳಿ ಬೀಸುತಿರೆ ಬಾಗಿದವು**
**ವೃಕ್ಷಗಳು ವಂದಿಸುತ ಶಂಕರನಿಗೆ"**

ಶ್ರೀರಾಮ, ಸೀತೆಯು ರಾವಣನಿಂದ ಅಪಹರಣಕ್ಕೊಳಗಾದಾಗ ಆಕೆಯನ್ನು ಹುಡುಕಿಕೊಂಡು ಚುಂಚಾದ್ರಿಗೆ ಬರುವ ಸನ್ನಿವೇಶವೊಂದು **'ಚುಂಚಾದ್ರಿ ಚಂದ್ರಿಕೆ'**ಯಲ್ಲಿ ವರ್ಣಿತವಾಗಿದೆ. **ಅಕ್ಕಮಹಾದೇವಿ,** ಚನ್ನಮಲ್ಲಿಕಾರ್ಜುನನನ್ನು ಹುಡುಕಿಕೊಂಡು ಹೋಗುವಾಗ ಕಾಡಿನ ಮರ–ಗಿಡ, ಪಕ್ಷಿ–ಪ್ರಾಣಿಗಳನ್ನೆಲ್ಲ "ಚನ್ನಮಲ್ಲಿಕಾರ್ಜುನನನ್ನು ನೀವೇನಾದರೂ ಕಂಡಿರಾ".

ಎಂದು ಕೇಳುವಂತೆ, ಶ್ರೀರಾಮ ಕೂಡ ಕಾಡಿನ ಹಕ್ಕಿಗಳನ್ನೆಲ್ಲ 'ಸೀತೆಯನ್ನು ಕಂಡಿರಾ'? ಎಂದು ಪ್ರಶ್ನಿಸುವುದು ಬಹು ಸೊಗಸಾಗಿ ಮೂಡಿ ಬಂದಿದೆ:

**"ಕೀರ ಬಕ ಕಾಕೋಲ ಕರೇಟು ಕ್ರಕರಗಳೆ**
**ಕಂಡಿಹಿರ ಕುಲಜಾತೆ ಭೂಮಿಜೆಯನು**
**ಜೀರುಂಡೆ ಜೇನುಗಳೆ ಕೆಂಭೂತ ಕಲಹಂಸ**
**ತೋರುವಿರ ತವಕದಿಂ ಜಾನಕಿಯನು"**

**"ಚುಂಚಾದ್ರಿ ಚಲುವ ನೋಡ"** ಸಂಚಿಕೆಯಲ್ಲಿನ ಕಾಡಿನ ಮೃಗ ಪಕ್ಷಿಗಳ ವರ್ಣನೆ ಮೆಲುಕು ಹಾಕುವಂತಿದೆ. ಅಪರೂಪದ ಕನ್ನಡ ಪದಗಳ ಪ್ರಯೋಗ ಸ್ವಾರಸ್ಯವೆನಿಸಿದೆ. ಈಶ್ವರನು ತಪಸ್ಸು ಮಾಡಲು ಚುಂಚಾದ್ರಿಗೆ ಬಂದಾಗ ಅಲ್ಲಿನ ಗಿಣಿ ಮತ್ತು ಮೊಲಗಳು ಹೇಗೆ ಕಾಣುತ್ತಿದ್ದವೆಂಬುದಕ್ಕೆ ಈ ಪದ್ಯಗಳು ಸಾಕ್ಷಿ:

**"ಕೊಕ್ಕಿನಿಂ ಕುಕ್ಕುತ್ತ ಹಸನಾದ ಹಣ್ಣುಗಳ**
**ರಸವನ್ನು ರಾಗದಿಂ ಸವಿಯುತಿಹವು**
**ರೆಕ್ಕೆಯಲಿ ರಂಜಿಸುವ· ಹೊಸತನದ ಹಸಿರಿನಿಂ**
**ಮೈಮರೆತು ಮೋದದಿಂ ಮೆರೆಯುತಿಹವು"**

**"ಮೊಲ ವೃಂದ ಮರಿಗಳನು ಆಡಿಸುತ ಅಲೆಯುತಿದೆ**
**ಬೆಟ್ಟದಲಿ ಬಹಳವಿವೆ ಚುಕ್ಕೆಯಂತೆ**
**ಹಲವಾರು ಹಸಿರ ಪೊದೆ ಗಿಡಗಳಲಿ ಗುಣಿಗಳಲಿ**
**ಕುಳಿತಿಹುದು ಕಾಣುತಿದೆ ಹೂಗಳಂತೆ"**

ಮೀನು-ಮೊಸಳೆಗಳ ಚಿತ್ರಣ ಕೂಡ ಮನಸೆಳೆಯುವಂಥದ್ದು, ಹನುಮೇಗೌಡರನ್ನು ಒಳ್ಳೆಯ ಕವಿ ಅನ್ನಲು ಈ ವರ್ಣನೆಗಳನ್ನು ನೋಡಿದರೆ ಸಾಕು!

**"ಮತ್ಸ್ಯಗಳು ಮಡುವಿನಲಿ ಇಕ್ಕರಿಸಿ ಈಜುತಿವೆ**
**ಪರಿಪರಿಯ ಪುಚ್ಛಗಳ ಚಾಲಿಸುತ್ತ**
**ಪ್ರೀತಿಯಿಂ ಪ್ರಚಲಿಸುತ ಮೇಲೇರಿ ಮಲೆಯುತ್ತ**
**ತೆವಳುತ್ತ ತೇಲುತಿವೆ ನಲಿನಲಿಯುತ"**

**"ಬಿಸಿಲಿನಲಿ ಬಂಡೆಗಳ ಮೇಲ್ಗಡೆಯೆ ಮೊಸಳೆಗಳು**
**ಮೈಯೊಡ್ಡಿ ಮಲಗಿಹವು ಅಂಚಿನಲ್ಲಿ**
**ಉಸಿರೆಳೆಯೆ ಉಬ್ಬುವುವು ಹೊಳ್ಳೆಗಳು ಹೊಟ್ಟೆಗಳು**
**ಕೋರೆಗಳು ಕಾಣುವುವು ಬಾಯಿಯಲ್ಲಿ".**

ಸೂಕ್ಷ್ಮ ಅವಲೋಕನಕ್ಕೆ ಈ ಪದ್ಯ ಸಾಕ್ಷಿ. ವರ್ಣಿಸುವ ವಸ್ತುವು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವುದು ಕವಿ ಸಾಮರ್ಥ್ಯದ ಕುರುಹು. ಇಡೀ ಜಗತ್ತು ಆದಿಶಕ್ತಿಯ ಆಧಾರದಲ್ಲಿಯೇ ನಡೆಯುತ್ತಿದೆ ಎನ್ನುವುದನ್ನು ಕವಿ ಹನುಮೇಗೌಡರು ಹೀಗೆ ಹೇಳುತ್ತಾರೆ:

**"ಹರಿ ಬೊಮ್ಮ ಹರರುಗಳ ಮೀರಿರ್ಪ ಮಹತ್ತರ**
**ಶಕ್ತಿಯಿಂ ಸಾಗುತಿದೆ ಬ್ರಹ್ಮಾಂಡವು**
**ಸರ್ವವನು ಸೃಜಿಸಿರುವ ಸರ್ವರನು ಸಲಹುತಿಹ**
**ಶ್ರೀ ಆದಿಶಕ್ತಿಯೇ ಆಧಾರವು"**

ನಕಾರಾತ್ಮಕ ಮಾತುಕತೆ ಯಾವಾಗಲೂ ಸಂಕಷ್ಟಕ್ಕೆ ಸಿಲುಕಿಸಿ ಬಿಡುತ್ತದೆ; ಇಲ್ಲ ಸಲ್ಲದ ತೊಂದರೆಗಳು ಕಾಡುತ್ತವೆ. ಇದಕ್ಕೆ ಕಾರಣ ಪ್ರೀತಿಯಿಂದ ಪ್ರೀತಿಯೇ ಬರುವಂತೆ, ದ್ವೇಷದಿಂದ ದ್ವೇಷವೇ ಮಾರ್ನುಡಿಯುತ್ತದೆ. – ಈ ಸತ್ಯವನು ಕವಿ ಹೀಗೆ ಬಣ್ಣಿಸುತ್ತಾರೆ:

**"ಸಟೆ ನುಡಿಯು ಸಿಡಿ ಮದ್ದು ಅಧಮ ನುಡಿ ಅಗ್ನಿ ಮುಡಿ**
**ನಿಂದನೆಯ ನುಡಿ ಸಿಡಿಲ ಹೊಡೆತದಂತೆ**
**ಕಠಿಣ ನುಡಿ ಕಾಡ್ಗಿಚ್ಚು ಚಾಡಿನುಡಿ ಚಿತೆಯ ಝಳ**
**ಬೈಗುಳವು ಬಡಬಾಗ್ನಿ ಕಿಡಿಗಳಂತೆ"**

ಸುಭಾಷಿತಗಳಂತೆ ಜೀವನಾನುಭವದಿಂದ ಮೂಡಿದ ಮಾತುಗಳಾಗಿ ಇವು ಸೆಳೆಯುತ್ತವೆ.

ಸುಖ–ದುಃಖಗಳು ಸಂಸಾರದಲ್ಲಿ ಸಹಜ. ದುಃಖವಿಲ್ಲದೆ ಬರೀ ಸುಖವೇ ಬೇಕೆನ್ನುವುದು ಮನುಷ್ಯನ ಇಂಗಿತ. ಆದರೆ ಬದುಕಿನ ನಿಯಮವೇ ಇದಾಗಿರುವುದರಿಂದ ಈ ನಿಯಮವನ್ನು ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ ಎನ್ನುವುದನ್ನು ಕವಿ ಹೀಗೆ ಬಣ್ಣಿಸುತ್ತಾರೆ:

**"ಫಲಂಗಳು ಪತ್ರಗಳು ಹೊಮ್ಮುವುವು ಹುದುಗುವುವು**
**ಆಶ್ರಯದ ಅಶ್ವತ್ಥ ತರು ಶಾಶ್ವತ**
**ಜಲಬುವಿಯ ಜೀವಿಗಳು ಉದ್ಭವಿಸಿ ಉಡುಗುವುವು**
**ಸುಖ ದುಃಖ ಸಂಸಾರ ತರು ಶಾಶ್ವತ"**

ಇಡೀ ಲೋಕ ಬ್ರಹ್ಮ ಸೃಷ್ಟಿ; ಆತ ಜೀವಿಗಳನ್ನು ಸೃಷ್ಟಿಸುತ್ತಾನೆ. ಬೇಕೆಂದಾಗ ಅವುಗಳನ್ನೆಲ್ಲ ಆಪೋಷನ ತೆಗೆದುಕೊಳ್ಳುತ್ತಾನೆ. ಜೇಡರ ಹುಳು ತನ್ನ ಬಾಯಿಂದ ಬಲೆ ನಿರ್ಮಿಸಿ, ಯಾವುದಾದರೂ ಕ್ರಿಮಿ, ಆ ಬಲೆಗೆ ಬಂದು ಬಿದ್ದಾಗ ಅದು ತನ್ನ ಉದರದೊಳಕ್ಕೆ ಸೆಳೆದುಕೊಳ್ಳುತ್ತದೆ. ಬ್ರಹ್ಮನ ನೀತಿ ಕೂಡ ಹೀಗೆಯೇ ಎಂದು ಹೇಳುವಾಗ ಕವಿ ವರ್ಣಿಸುವುದು ಹೀಗೆ:

**"ಜಿಹ್ವೆಯಿಂ ಜೇಡ ತಾ ಬೀಸುವುದು ಬಲೆಯನ್ನು**
**ಮುದದಿ ತಾ ಮರಳಿಯದ ಸೆಳೆಯುತಿಹುದು**
**ಬ್ರಹ್ಮ ತಾ ಬೊಮ್ಮಾಂಡ ಸೃಜಿಸಿಹನು ಸ್ವೇಚ್ಛೆಯಿಂ**
**ಸೆಳೆಯಲವ ಸೇರುವುದವನುದರವನದು"**

ಆತ್ಮಕ್ಕೆ, ದೇಹ, ತಕ್ಷಣದ ಒಂದು ಆಸರೆ ಅಷ್ಟೆ! ಬಟ್ಟೆ ಬದಲಿಸಿದಂತೆ ಅದು ದೇಹವನ್ನು ಬದಲಿಸುತ್ತ ಹೋಗುತ್ತದೆ. ಆತ್ಮ ತನ್ನೊಳು ಇರುವಷ್ಟು ಹೊತ್ತು ಮಾತ್ರ ದೇಹ ಉಸಿರಾಡುತ್ತದೆ. ಆತ್ಮ

ಕಳೆದುಕೊಂಡ ಮರುಕ್ಷಣವೇ ದೇಹ ನಿರ್ಜೀವವಾಗುತ್ತದೆ ಎನ್ನುವುದು ಆಧ್ಯಾತ್ಮಿಕ ಲೋಕದ ಜನರ ನಂಬಿಕೆ. ಇದನ್ನು ಹನುಮೇಗೌಡರು ವರ್ಣಿಸುವುದು ಹೀಗೆ:

"ಹಾವಿರುವ ಹುತ್ತವನು ಬಡಿದಲ್ಲಿ ಬರದು ಫಣಿ
ಕೋವೆಯಿಂ ಕೋವೆಗದು ಧಾವಿಸುವುದು
ಅವಿತಿರುವ ಆತ್ಮ ತಾ ತನುವಿನಲಿ ತಾ ಹುದುಗಿ
ತನು ತೊರೆದು ತನು ಪಡೆದು ತೆರಳುತಿಹುದು"

೭೦ನೇ ಮಠಾಧಿಪತಿಗಳಾದ ಶ್ರೀರಮಾನಂದನಾಥರ ಬೋಧನೆಯನ್ನು ಕವಿ ಹನುಮೇಗೌಡರು ವರ್ಣಿಸುವಾಗ, ಕರುನಾಡ ಸಿರಿ ಚೆಲುವನ್ನು ಅಭಿಮಾನದಿಂದ ಕೊಂಡಾಡುತ್ತಾರೆ. ಈ ಮಾತುಗಳು, ಕವಿಯ ಮನಸ್ಸಿನಲ್ಲಿರುವ ತನ್ನ ನಾಡಿಗೆ ಸಂಬಂಧಿಸಿದ ಪ್ರೀತಿ, ಮಮತೆಯನ್ನು ಪ್ರಕಟಿಸುವಂಥದ್ದಾಗಿವೆ:

ಭಾರತಾಂಬೆಯ ತನುಜೆ ಕರುನಾಡ ಕುಲದೇವಿ
ಕೆಚ್ಚೆದೆಯ ಕನ್ನಡತಿ ನಮ್ಮ ತಾಯಿ
ಸಿರಿಯೊಡಲ ಸೊಬಗಿನಲಿ ಮಮತೆಯ ಮಡಿಲಿನಲಿ
ಹಾಲುಣಿಸಿ ಹರಸುವಳು ಕರುಣಾಮಯಿ

ಸಲಹಿದಳು ಸಹಿಸುತ್ತ ಕಷ್ಟ ಸಂಕಷ್ಟಗಳ
ತೊಟ್ಟಿಲಲಿ ತೂಗಿ ಜೋಗುಳವನಾಡಿ
ಪಾಲ್ ಕುಡಿಸಿ ಫಲಂಗಳ ತಿನಿಸುತ್ತ ತಾನ್ ನಮಗೆ
ಬೆಳೆಸಿಹಳು ಬಹಳ ಶಿಕ್ಷಣವ ನೀಡಿ

ಪರಿಮಳದ ಪುಷ್ಪಗಳ ಮುಡಿದಿರುವ ಮಾತೆ ತಾ
ತರು ಬನದ ತುರುಬನ್ನು ಕಟ್ಟಿರುವಳು
ಕರಗಳಲಿ ಕನಕ ಬಳೆ ಹಚ್ಚನೆಯ ಹಸಿರುಡುಗೆ
ಸಹ್ಯಾದ್ರಿ ಶಿರಮಕುಟ ಧರಿಸಿರುವಳು

ಆಗುಂಬೆ ಅಂಚಿನಲಿ ಸೂರ್ಯಾಸ್ತ ಸೊಗನೋಡ
ಜೋಗದಲಿ ಜಲಧಾರೆಗಾನ ಕೇಳ
ಸಾಗರದ ಸಪ್ಪಳದ ಹಕ್ಕಿಗಳ ಹಾಡುಗಳ
ಇಂಪಾದ ಇಂಚರವ.ಸವಿದು ಹೇಳ

ಬೇಲೂರು ಬೆಳಗೊಳದ ಸಿರಿವಂತ ಶಿಲ್ಪಕಲೆ
ಮನ ತಣಿಸಿ ಮೆರೆಯುತಿದೆ ಕರುನಾಡಲಿ
ಕಲ್ಲಿನಲಿ ಕಡೆದಿರುವ ಸುಂದರಾ ಶಿಲೆಬಾಲೆ
ಕಣ್ಗಳಲಿ ಕರೆಯುತಿದೆ ಹಳೆಬೀಡಲಿ

ಕಸ್ತೂರಿ ಕನ್ನಡದ ಸಿರಿವಂತ ಸಾಹಿತ್ಯ
ಕರುನಾಡ ಕವಿಗಳಲಿ ಮಿಡಿಯುತಿಹುದು
ಹೆಸರಾಂತ ಹಳೆ ಭಾಷೆ ಸುಗಂಧವ ಸೂಸುತಿರೆ
ಕಂಪನದ ಕವಿ ವೃಂದ ಸವಿಯುತಿಹುದು

ಕನ್ನಡದ ಕಾವ್ಯದಲಿ ಸುಮನೋಜ್ಞ ಸಾಹಿತ್ಯ
ಹರಸಿಹರು ಹೃನ್ಮನದಿ ಕವಿ ರತ್ನರು
ರನ್ನ ಕವಿ ರೌದ್ರವನು ಪಂಪ ಕವಿ ಪೆಂಪನ್ನು
ಸಾಹಿತ್ಯ ಸಾಗರದಿ ಭರಿಸಿರುವರು.

ಕರುನಾಡ ಕಾವ್ಯಗಳು ಸೂಸುತಿವೆ ಸೌರಭವ
ಹರಿಸುತ್ತ ಹೊನಲಾಗಿ ಕವಿ ಭಾವವ
ಸಿರಿತನದ ಸಾಹಿತ್ಯ ರೋಮಾಂಚ ರಸಧಾರೆ
ಕೆರಳಿಪುವು ಕನ್ನಡದ ಅಭಿಮಾನವ

ಭಕ್ತಿಯಿಂ ಬಸವಣ್ಣ ಸತ್ಯವನು ಸಾರುತ್ತ
ನೀತಿ ಘೃತ ನೈವೇದ್ಯ ನೀಡಿರುವರು
ಅಕ್ಕರೆಯ ಅಕ್ಕನಿಂ ಸಕ್ಕರೆಯ ಸವಿ ನುಡಿಯ
ಕಿಕ್ಕಿರಿದು ಕೇಳಿ ಜನ ನಲಿಯುತಿಹರು

ಶ್ರೀಸಿ.ಹನುಮೇಗೌಡರು ಸಮರ್ಥ ಕವಿ ಎನ್ನುವುದಕ್ಕೆ ಇಷ್ಟು ಪದ್ಯಗಳನ್ನು ಅವಲೋಕಿಸಿದರೆ ಸಾಕು, ಅವರ ವಿದ್ವತ್ತಿನ ಪರಿಚಯವಾಗುತ್ತದೆ. ಹೆಜ್ಜೆ ಹೆಜ್ಜೆಯಲ್ಲೂ ರೂಪಕಗಳಲ್ಲೇ ಮಾತನಾಡುವ ಅವರು, ಮಾತಿನ ಚಮತ್ಕಾರಿಕತೆಯಿಂದ ಕಾವ್ಯ, ಆಕರ್ಷಣೀಯವೆನಿಸುವಂತೆ ಸೃಷ್ಟಿಸಿದ್ದಾರೆ. ಸುಮಾರು ೭೧ ಮಠಾಧಿಪತಿಗಳ ವಿಸ್ತೃತ ಬೋಧನೆಯನ್ನು ವರ್ಣಿಸುವಾಗ, ಎಲ್ಲಿಯೂ ಕೂಡ ಬೇಸರಕ್ಕೆ ಕಾರಣವಾಗದಂತೆ ಕವಿಯನ್ನು ಕಾಪಾಡಿರುವುದು ಅವರ ವರ್ಣನಾ ಕೌಶಲ್ಯವೇ ಎನ್ನುವುದರಲ್ಲಿ ಸಂದೇಹವಿಲ್ಲ. ಹೀಗಾಗಿ ದೊಡ್ಡರಂಗೇಗೌಡರು **'ಚುಂಚಾದ್ರಿ ಚಂದ್ರಿಕೆ'**ಯ ಮುನ್ನುಡಿಯಲ್ಲಿ "ಪ್ರೊ||ಸಿ.ಹನುಮೇಗೌಡರು ಸಾಹಿತ್ಯಾರಾಧಕರು; ಕಾವ್ಯಾಭಿರುಚಿ ಉಳ್ಳವರು; ಹೀಗಾಗಿ ಅವರ ಮಹಾಕಾವ್ಯದಲ್ಲಿ ಎಲ್ಲ ಬಗೆ ಬಣ್ಣನೆಗಳಿವೆ, ರೂಪಕಗಳಿವೆ; ದೀಪಕಗಳಿವೆ; ಕಾವ್ಯಾಲಂಕಾರಗಳೇ ಇಲ್ಲಿ ಇಡಿಕಿರಿದಿವೆ. ಅವರು ಛಂದಸ್ಸನ್ನು ಅನುಸರಿಸಿರುವ ರೀತಿಯ ಬಗೆಗೇ ಒಂದು ಮಹಾಪ್ರಬಂಧ ಬರೆಯುವಷ್ಟು ಅಗಾಧ ಸರಕಿದೆ. ಅವರು ತಾವು ಕೈಗೆತ್ತಿಕೊಂಡ ವಸ್ತುವನ್ನು ವೈಭವೀಕರಿಸಿರುವ ಅಂಶಗಳನ್ನೇ ದೃಷ್ಟಿಯಲ್ಲಿರಿಸಿಕೊಂಡು ನೋಡಿದರೆ... ಇದೊಂದು **"ವರ್ಣಕ ಮಹಾಕಾವ್ಯ"**ವೇ ಸರಿ! ಇಲ್ಲಿ ಇಲ್ಲದ ಬಣ್ಣನೆಗಳೇ ಇಲ್ಲ. ಹೆಜ್ಜೆ ಹೆಜ್ಜೆಗೆ ಓದುಗನ ರಸಯಾತ್ರೆಯಲ್ಲಿ ರಸ ತೀರ್ಥಗಳಿವೆ, ಭಾವಕಾರಂಜಿಗಳಿವೆ, ನುಡಿ ಉದ್ಯಾನಗಳಿವೆ, ಪುರಾಣದ ದಟ್ಟ ಕಾನನಗಳಿವೆ. ಪಾತ್ರಗಳ ಬೃಹದರ್ಶನವೂ ಇಲ್ಲಿ ಇಲ್ಲದಿಲ್ಲ. .ಆದ್ದರಿಂದ **"ಚುಂಚಾದ್ರಿ ಚಂದಿಕೆ"**ಯ ವಸ್ತು ವಿಸ್ತಾರ. ಅದು ಅಂಬರದಷ್ಟೇ ವಿಶಾಲ. ಕ್ಷಿತಿಜದಷ್ಟು ಹರವು ಪಡೆದಿದೆ. ಕಥಾ ಬಿತ್ತಿಯ ದೃಷ್ಟಿಯಿಂದಲೂ ಇದು ಬೃಹತ್ಕಾವ್ಯವೇ ಆಗಿದೆ" ಎಂದು ಅಭಿಪ್ರಾಯ ಪಡುತ್ತಾರೆ. ಹನುಮೇಗೌಡರ ಒಟ್ಟಾರೆ ಕಾವ್ಯ ಶೈಲಿ ನೋಡಿದಾಗ, ದೊಡ್ಡರಂಗೇಗೌಡರ ಈ ಮಾತು ಎಲ್ಲಿಯೂ ಉತ್ಪ್ರೇಕ್ಷೆಯಾಗಿ ಕಾಣುವುದಿಲ್ಲ!

# ಮಹಾಕಾವ್ಯವಾಗಿ ಚುಂಚಾದ್ರಿ ಚಂದ್ರಿಕೆ

ಅಧ್ಯಾಯ-೨ರಲ್ಲಿ, ಪ್ರಚಲಿತವಿರುವ ಮಹಾಕಾವ್ಯ ಲಕ್ಷಣಗಳನ್ನು ಪ್ರಸ್ಥಾಪಿಸಲಾಗಿದೆ. ಆದರೆ ಕಾವ್ಯ ಲಕ್ಷಣಗಳು, ವಿಮರ್ಶಾ ಸೂತ್ರಗಳು ತಾತ್ಕಾಲಿಕವಾದವು; ತಾತ್ಪೂರ್ತಿಕವಾದವು. ಸಶಕ್ತವಾದ ಹೊಸ ಕಾವ್ಯವೊಂದು ರಚನೆಯಾದಾಗ ನಾವು ಬೇರೆಯದೇ ಆದ ನೆಲೆಗಳಿಂದ ಕಾವ್ಯವನ್ನು ಅವಲೋಕಿಸಬೇಕಾಗುತ್ತದೆ. ಈ ದೃಷ್ಟಿಯಿಂದ **"ಚುಂಚಾದ್ರಿ ಚಂದ್ರಿಕೆ"**ಯನ್ನು ವಿವರವಾಗಿ ಸಮೀಕ್ಷಿಸುವುದು ಮುಂದಿನ ಉದ್ದೇಶ.

ಪ್ರಾಚೀನ ಕಾಲದಲ್ಲಿ ಮತ-ಧರ್ಮ ಪ್ರಧಾನವಾದ ಕೃತಿಗಳಲ್ಲಿ ಧರ್ಮ ಸ್ಥಾಪಕನ ಜನನ-ಬಾಲ್ಯ-ಸಾಧನೆ-ಮೊದಲಾದವುಗಳನ್ನು ವರ್ಣಿಸಲಾಗುತ್ತಿತ್ತು. ಇಂತಹ ಕೃತಿಗಳನ್ನು ಪುರಾಣ, ಚರಿತೆ, ಲೀಲೆ - ಮೊದಲಾದ ಹೆಸರುಗಳಿಂದ ಗುರುತಿಸಲಾಗುತ್ತಿತ್ತು. ಉದಾ.: ಆದಿಪುರಾಣ, ಅಜಿತ ತೀರ್ಥಂಕರ ಪುರಾಣ ತಿಲಕ; ಹರಿಹರನು **'ಬಸವರಾಜ ದೇವರ ರಗಳೆ'** ಎಂದಷ್ಟೇ ಹೆಸರಿಸಿದ್ದರೆ, ತೆಲುಗಿನಲ್ಲಿ ಬಸವಣ್ಣನವರ ಕಥೆಯನ್ನು ಬರೆದವರು **"ಬಸವ ಪುರಾಣ"** ಎಂದಿದ್ದಾರೆ. ರಾಘವಾಂಕನು **"ಸಿದ್ಧರಾಮ ಚರಿತೆ"** ಎಂದಿದ್ದರೆ, ಚಾಮರಸನು **"ಪ್ರಭು ಲಿಂಗಲೀಲೆ"** ಎಂದಿದ್ದಾನೆ. ಈ ದೃಷ್ಟಿಯಿಂದ **"ಚುಂಚಾದ್ರಿ ಚಂದ್ರಿಕೆ"** ಎಂಬ ಹೆಸರು ಕೂಡ ವಿಶಿಷ್ಟವಾಗಿದೆ. ಇದಕ್ಕೆ ಕಾರಣವೆಂದರೆ ಪ್ರಾಚೀನ ಕೃತಿಗಳ ಹಾಗೆ ಇದು ಒಬ್ಬ ನಾಯಕನ ಜೀವನ ವೃತ್ತಾಂತ ಮತ್ತು ಬೋಧನೆಗಳನ್ನು ಕುರಿತ ಗ್ರಂಥವಲ್ಲ. ಇಲ್ಲಿ ನಾಯಕ ಪಾತ್ರವೆನ್ನುವುದಾದರೆ ಚುಂಚಾದ್ರಿಯನ್ನೇ ನಾಯಕ ಎನ್ನಬೇಕಾಗುತ್ತದೆ. ಆದ್ದರಿಂದ ಚುಂಚಾದ್ರಿಯ ಮಹಿಮೆಯ ಮೇಲೆ ಬೆಳದಿಂಗಳಿನಂತೆ ತಣ್ಣನೆಯ ಬೆಳಕು ಚೆಲ್ಲುವ ಕಾವ್ಯವನ್ನು **"ಚುಂಚಾದ್ರಿ ಚಂದ್ರಿಕೆ"** ಎಂದು ಹೆಸರಿಸಿರುವುದು ಔಚಿತ್ಯ ಪೂರ್ಣವಾಗಿದೆ. ಕಾವ್ಯದ ಮೂರನೇ ಅಧ್ಯಾಯದಲ್ಲಿ ನಾಥ ಪರಂಪರೆಯ ವಿವರಗಳಿದ್ದರೆ, ನಾಲ್ಕನೇ ಅಧ್ಯಾಯದ ಐದನೇ ಉಪ-ಅಧ್ಯಾಯದಲ್ಲಿ ಶ್ರೀ ಬಾಲಗಂಗಾಧರನಾಥರ ಜೀವನ ಮತ್ತು ಸಾಧನೆಯ ವಿವರಗಳು ಬರುತ್ತವೆ. ಇಲ್ಲಿ ಬಾಲಗಂಗಾಧರನಾಥ ಸ್ವಾಮಿಯವರನ್ನು **"ಕಾವ್ಯ ನಾಯಕ"** ಎಂದು ಕೊಳ್ಳಬಹುದಾದರೂ, ಪ್ರಾಚೀನ ಮಹಾಕಾವ್ಯಗಳ ನಾಯಕ ಪಾತ್ರಗಳ ಚಿತ್ರಣಕ್ಕೂ, ಪ್ರಸ್ತುತ ಗ್ರಂಥದ ನಾಯಕನಿಗೂ ಸಾಕಷ್ಟು ವ್ಯತ್ಯಾಸಗಳಿವೆ ಎಂಬುದನ್ನು ಕೂಡ ನಾವು ಗಮನಿಸಬೇಕು. ಮತ-ಧರ್ಮ ಪ್ರಧಾನವಾದ ಪ್ರಾಚೀನ ಮಹಾಕಾವ್ಯಗಳಲ್ಲಿ ನಾಯಕನ ಜನನ, ಬಾಲ್ಯ ಇತ್ಯಾದಿಗಳನ್ನು ಪವಾಡ ಸದೃಶವಾಗಿ, ಅಲೌಕಿಕ ಮಹಿಮೆಯಿಂದ ಕೂಡಿದ ಪಾತ್ರವಾಗಿ ಚಿತ್ರಿಸಲಾಗುತ್ತಿತ್ತು. ಆದರೆ ಪ್ರಸ್ತುತ ಕಾವ್ಯ ನಾಯಕರ ಜನನ-ಬಾಲ್ಯ-ವಿದ್ಯಾಭ್ಯಾಸ -ಮೊದಲಾದವು ಸಾಮಾನ್ಯ ಮನುಷ್ಯರ ಬಗೆಯಲ್ಲಿಯೇ ಚಿತ್ರಿತವಾಗಿವೆ. ಪ್ರಾಚೀನ ಮಹಾಕಾವ್ಯಗಳಲ್ಲಿ, ಅವು ಶೃಂಗಾರ-ವೀರರಸ ಪ್ರಧಾನವಾಗಿದ್ದರೆ, ನಾಯಕಿಯ ಪಾತ್ರ ಬರುತ್ತದೆ. ಕಾವ್ಯವು ಮತಧರ್ಮ

ಪ್ರಧಾನವಾಗಿದ್ದರೆ ಕಾವ್ಯ ನಾಯಕನಿಗೆ ಮಾರ್ಗದರ್ಶಕ ಪಾತ್ರವಾಗಿ, ಆತನ ಜೀವನದ ತಿರುವುಗಳಿಗೆ ಕಾರಣವಾದ ಪಾತ್ರವಾಗಿ ಬರುತ್ತವೆ. ಆದರೆ ಪ್ರಸ್ತುತ ಕಾವ್ಯದಲ್ಲಿ ನಾಯಕಿ ಮಾತ್ರವಲ್ಲ, ಸ್ತ್ರೀ ಪಾತ್ರಗಳೇ ಇಲ್ಲವೆಂಬುದು ವಿಶೇಷ. ಬಾಲಗಂಗಾಧರನಾಥರನ್ನು ಆಧ್ಯಾತ್ಮಿಕ ಪುರುಷರನ್ನಾಗಿ ಚಿತ್ರಿಸಿರುವುದರಿಂದ ಸ್ತ್ರೀ ಪಾತ್ರದ ಗೈರುಹಾಜರಿ ಸಹಜವೆನಿಸಿದೆ.

ಪ್ರಾಚೀನ ಧಾರ್ಮಿಕ ಮಹಾಕಾವ್ಯಗಳಲ್ಲಿ ಧರ್ಮದ ಕಲ್ಪನೆಯು ಸಾಮಾನ್ಯ ಧರ್ಮ, ವರ್ಣ ಧರ್ಮ, ಆಶ್ರಮ ಧರ್ಮ, ರಾಜ ಧರ್ಮ, ಮೋಕ್ಷ ಧರ್ಮ – ಹೀಗೆ ಒಂದಲ್ಲ ಒಂದು ವಿಶಿಷ್ಟ ಧರ್ಮವು ಪ್ರಧಾನವಾಗಿರುತ್ತಿತ್ತು. ಆದರೆ ಪ್ರಸ್ತುತ ಕಾವ್ಯದಲ್ಲಿ ಈ ಎಲ್ಲ ಧರ್ಮಗಳನ್ನೂ ಮೀರಿದ ಸಮಾಜ ಧರ್ಮ ಅಥವಾ ಮಾನವ ಧರ್ಮ ಎಂಬುದಕ್ಕೆ ವಿಶೇಷ ಮಹತ್ವ ದೊರೆತಿದೆ ಎಂಬುದನ್ನು ಗಮನಿಸಬೇಕು. ಪ್ರಾಚೀನ ಕಾವ್ಯಗಳಲ್ಲಿ ನಾಯಕನ ಸಾಹಸಗಳು, ಪ್ರಧಾನವಾಗಿ ಯುದ್ಧ, ವಿಜಯ, ರಾಜ್ಯ ವಿಸ್ತರಣೆ, ಸಂಪತ್ತಿನ ಸಂಗ್ರಹ – ಇವುಗಳಿಗೆ ಪ್ರಾಧ್ಯಾನ್ಯ ದೊರೆಯುತ್ತಿತ್ತು. ಆದರೆ ಪ್ರಸ್ತುತ ಕಾವ್ಯದಲ್ಲಿ ಚಿತ್ರಿತವಾಗಿರುವ ಬಹುಮುಖ್ಯ ಸಾಧನೆಯೆಂದರೆ ಸಾರ್ವಜನಿಕ ಶಿಕ್ಷಣ ಕ್ಷೇತ್ರದಲ್ಲಿ ಬಾಲಗಂಗಾಧರರು ನಡೆಸಿದ ವಿಶಿಷ್ಟ ಪ್ರಯತ್ನ.

ಪ್ರಾಚೀನ ಕಾಲದಲ್ಲಿ ಧರ್ಮ ಪಾಲನೆ, ವಿದ್ಯಾಭ್ಯಾಸ, ಆ ಮೂಲಕ ವ್ಯಕ್ತಿಯ ಮೋಕ್ಷ ಅಥವಾ ಮುಕ್ತಿಯ ಸಾಧನೆಗೆ ಪ್ರಾಧಾನ್ಯ ದೊರೆಯುತ್ತಿದ್ದಿತು. ಈ ಅರ್ಥದಲ್ಲಿ ಅವರಿಗೆ ವಿದ್ಯೆ ಎಂದರೆ ಮೋಕ್ಷ ಸಾಧನೆಗೆ ದಾರಿ ಮಾಡಿಕೊಡುವ ತಿಳುವಳಿಕೆಯಾಗಿತ್ತು. **"ಸಾ ವಿದ್ಯಾ ಯಾ ವಿಮುಕ್ತಯೇ"** ಎನ್ನುತ್ತಿದ್ದರು. ಎಂದರೆ ಲೌಕಿಕ ಬಂಧನದಿಂದ ಬಿಡುಗಡೆಗೆ ಆಧಾರವಾದ ವಿದ್ಯೆ ಎಂದರೆ ಆಧ್ಯಾತ್ಮ ವಿದ್ಯೆಯೇ ಅವರಿಗೆ ಮುಖ್ಯವಾಗಿತ್ತು. ಆದರೆ ಪ್ರಸ್ತುತ ಕಾಲದಲ್ಲಿ ನಾವು ವಿದ್ಯೆ, ಮುಕ್ತಿ– ಇವುಗಳ ಅರ್ಥವನ್ನು ವಿಸ್ತರಿಸಿಕೊಳ್ಳಬೇಕಾಗಿದೆ. ಇಲ್ಲಿ ವಿದ್ಯೆ ಎಂದರೆ ಲೌಕಿಕ ವಿದ್ಯೆಯೂ ಆಗಬಹುದು. ಮುಕ್ತಿ ಎಂದರೆ ಅಜ್ಞಾನ, ಬಡತನಗಳಿಂದ ಬಿಡುಗಡೆ – ಈ ಅರ್ಥದಲ್ಲಿ ಅಜ್ಞಾನದಿಂದ ಮುಕ್ತಿ ಕೊಡುವಂತಹುದೇ ವಿದ್ಯೆ. ಅಂತಹ ವಿದ್ಯೆಯ ಪ್ರಸಾರದಲ್ಲಿ ಆದಿಚುಂಚನಗಿರಿ ಮಠ ಮತ್ತು ಬಾಲಗಂಗಾಧರನಾಥ ಸ್ವಾಮಿಗಳು ಮಹತ್ವದ ಪಾತ್ರ ವಹಿಸಿದ್ದಾರೆಂಬುದನ್ನು ಗಮನಿಸಬೇಕು. ಈ ಕಾರಣದಿಂದಾಗಿಯೇ ಪ್ರಸ್ತುತ ಕೃತಿಕಾರರು ಶಿಕ್ಷಣ ಕ್ಷೇತ್ರದಲ್ಲಿ ಸ್ವಾಮೀಜಿಯವರ ಸಾಧನೆಗಳಿಗೆ ವಿಶೇಷ ಮಹತ್ವ ನೀಡಿದ್ದಾರೆ.

ಸಾಮಾನ್ಯವಾಗಿ ಪ್ರಾಚೀನ ಮಹಾಕಾವ್ಯಗಳಲ್ಲಿ ವೀರ ರಸ, ಶೃಂಗಾರ ರಸ ಕೆಲವೊಮ್ಮೆ ಶಾಂತರಸ ಇವುಗಳಲ್ಲಿ ಒಂದಕ್ಕೆ ಪ್ರಾಧಾನ್ಯವಿರುತ್ತಿತ್ತು. ಪ್ರಸ್ತುತ ಕಾವ್ಯವು ಭಕ್ತಿ ಪ್ರಧಾನವಾಗಿರುವುದರಿಂದ ಇಲ್ಲಿ ಶಾಂತರಸವೇ ಪ್ರಧಾನವೆಂದು ಹೇಳಬಹುದು. ಈ ಶಾಂತರಸ ಪೋಷಣೆಗೆ ಆಧಾರವಾಗಿ ಧ್ಯಾನ–ತಪಸ್ಸು–ಭಕ್ತಿ ಸಾಧನೆ–ಸಂಯಮ –ಇವುಗಳು ಚಿತ್ರಿತವಾಗಿವೆ. ಇದಕ್ಕೆ ಪೋಷಕವಾಗಿ ಪ್ರಾಚೀನ ಕಾವ್ಯಗಳಲ್ಲಿ ಋಷ್ಯಾಶ್ರಮಗಳ ವರ್ಣನೆ ಬಂದ ಹಾಗೆ ಇಲ್ಲಿ ಚುಂಚಾದ್ರಿ ಪರಿಸರದ ವರ್ಣನೆ ವಿವರವಾಗಿಯೂ ಮನೋಹರವಾಗಿಯೂ ಬಂದಿದೆ. 'ಗೋರಕ್ಷ

**ಪ್ರಸಂಗ**'ದಲ್ಲಿ ಮಚ್ಚೇಂದ್ರನಾಥನು ತಿಪ್ಪೇಗುಂಡಿಯ ಬಳಿ ನಿಂತು **'ಬಾ ಹಸುಳೆ ಬಾ'** ಎಂದು ಕರೆಯುವುದು, ಆಗ ಗೊಬ್ಬರದ ಗುಂಡಿಯಲ್ಲಿ ಬೆಳೆದ ಮಗುವೊಂದು ಎದ್ದು ಬರುವುದನ್ನು ಹನುಮೇಗೌಡರು ಮನೋಹರವೆನಿಸುವಂತೆ ವರ್ಣಿಸಿದ್ದಾರೆ. ಈ ಪ್ರಸಂಗವನ್ನು ಅದ್ಭುತ ರಸಕ್ಕೆ ಉದಾಹರಣೆಯಾಗಿ ಪರಿಗಣಿಸಬಹುದು. ಹಾಗೆಯೇ ಮತ್ಸೇಂದ್ರನು ಸ್ತ್ರೀ ರಾಜ್ಯದಲ್ಲಿ ಸುಖ ಲೋಲುಪ್ತನಾಗಿ ಮೆರೆಯುವ ಪ್ರಸಂಗದಲ್ಲಿ ಕ್ವಚಿತ್ತಾಗಿ ಶೃಂಗಾರ ರಸ ಕಾಣಿಸಿಕೊಂಡಿದೆ. ವೀರ ಪಾತ್ರಗಳನ್ನು ವರ್ಣಿಸುವ ಪರಿಭಾಷೆಯಲ್ಲಿ ಸ್ವಾಮೀಜಿಯವರನ್ನು **'ಸಾಂಸ್ಕೃತಿಕ ವೀರ'** (Cultural Hero) ಎಂದು ಕರೆಯಬಹುದಾಗಿದೆ. ಮತಧರ್ಮ ಮತ್ತು ಚುಂಚನಗಿರಿ ಮಠವನ್ನು ಸಾಧನವಾಗಿ ಬಳಸಿಕೊಂಡು, ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರ ಪ್ರಗತಿ ಸಾಧಿಸಿದ್ದಾರೆ ಎಂಬುದು ಇಲ್ಲಿನ ವಿಶೇಷ.

ಚುಂಚಾದ್ರಿ ಚಂದ್ರಿಕೆಯ ಎಲ್ಲ ಪದ್ಯಗಳೂ ಚೌಪದಿಯಲ್ಲಿ ಇವೆ. ಈ ಕಾವ್ಯ, ದೇಸೀಯ ಛಂದಸ್ಸಿನಲ್ಲಿದೆ, ಮೊದಲನೆಯ ಹಾಗೂ ಮೂರನೆಯ ಪಾದಗಳಲ್ಲಿ ಐದೈದು ಮಾತ್ರೆಗಳಿಂದ ಕೂಡಿದ ನಾಲ್ಕು ನಾಲ್ಕು ಗಣಗಳಿವೆ. ಇವುಗಳಲ್ಲಿ ಮೊದಲನೆಯ ಮತ್ತು ಎರಡನೆಯ ಗಣಗಳ ಮೊದಲನೆಯ ಮಾತ್ರೆಗಳು ಒಂದೇ ವರ್ಗಕ್ಕೆ ಸೇರಿದವುಗಳಾಗಿವೆ. ಹಾಗೆಯೇ ಮೂರನೆಯ ಹಾಗೂ ನಾಲ್ಕನೆಯ ಗಣಗಳ ಮೊದಲನೆಯ ಮಾತ್ರೆಗಳು ಒಂದೇ ವರ್ಗಕ್ಕೆ ಸೇರಿದವುಗಳಾಗಿವೆ. ಮೊದಲನೆಯ ಪಾದದ ಎರಡನೆಯ ವರ್ಣ ಹಾಗೆಯೇ ಮೂರನೆಯ ಪಾದದ ಎರಡನೆಯ ವರ್ಣಗಳು ಒಂದೇ ವರ್ಗಕ್ಕೆ ಸೇರಿದವುಗಳಾಗಿವೆ. ಹಾಗೆಯೇ ಎರಡನೆಯ ಹಾಗೂ ನಾಲ್ಕನೆಯ ಪಾದಗಳಲ್ಲಿ ಮೊದಲನೆಯ, ಎರಡನೆಯ ಹಾಗೂ ಮೂರನೆಯ ಗಣಗಳಲ್ಲಿ ಐದೈದು ಮಾತ್ರೆಗಳೂ ಹಾಗೂ ಮತ್ತೊಂದರಂತೆ ಮಾತ್ರೆಗಳಿವೆ. ಹಾಗೂ ಅಂತ್ಯಾಕ್ಷರಗಳು ಒಂದೇ ವರ್ಗಕ್ಕೆ ಸೇರಿವೆ. ಪ್ರಾಸಗಳನ್ನು ಸಾಧ್ಯವಾದ ಮಟ್ಟಿಗೆ ಎಲ್ಲಾ ಕಡೆಯೂ ಕಾಪಾಡಿಕೊಂಡು ಬರಲಾಗಿದೆ. ಭಾವಕ್ಕೆ ಭಂಗ ಬಾರದಂತೆ ರಚಿಸಲಾಗಿದೆ.

ಇದು ಪ್ರಾಚೀನ ಕಾವ್ಯಗಳಲ್ಲಿ ಕಂಡು ಬರುವ ಕುಸುಮ ಷಟ್ಪದಿ ಕೂಡ ಆಗಬಹುದು, ಕುಸುಮ ಷಟ್ಪದಿಯ ಒಂದು, ಎರಡು, ನಾಲ್ಕು ಐದನೆಯ ಸಾಲುಗಳಲ್ಲಿ ಐದೈದು ಮಾತ್ರೆಯ ಎರಡೆರಡು ಗಣಗಳೂ, ಮೂರು ಆರನೆಯ ಸಾಲುಗಳಲ್ಲಿ ಐದೈದು ಮಾತ್ರೆಯ ಮೂರು ಗಣಗಳೂ, ಕಡೆಯಲ್ಲಿ ಒಂದು ಗುರುವೂ ಬರುತ್ತವೆ. ಇಲ್ಲಿ ಕೂಡ ಮೂರು, ಆರನೆಯ ಪಾದದ ಕಡೆಯ ಅಕ್ಷರವನ್ನು, ಅದು ಲಘುವಾಗಿದ್ದರೂ, ಗುರುವಾಗಿ ಉಚ್ಚರಿಸಬಹುದು, ಇಷ್ಟೇ ಅಲ್ಲದೆ ಛಂದಸ್ಸಿನಲ್ಲಿ ವೈವಿಧ್ಯವನ್ನು ತರುವ ದೃಷ್ಟಿಯಿಂದ ಕವಿ **'ಪದ್ಮಗಣ'** ಮತ್ತು **'ಮುಡಿ'**ಗಳನ್ನೂ ಬಳಸಿದ್ದಾರೆ. (ಪದ್ಮಗಣ–ಮುಡಿಗಳ ಬಗೆಗಿನ ವಿವರಗಳನ್ನು ತೀ.ನಂ.ಶ್ರೀಯವರ **ಮಾತ್ರೆ, ಮುಡಿ, ಪದ್ಮಗಣ** ಎಂಬ ಪ್ರಬಂಧದಲ್ಲಿ ನೋಡಬಹುದು); **'ಸಮಾಲೋಕನ'**, ತೀ.ನಂ.ಶ್ರೀ ಪುಟ–೨೧೨)

ಉದಾ.:

– ∪ – ∪ ∪ ∪∪∪ ∪∪ – ∪ ∪ ∪ – ∪

**ಭಾರತಾಂ।ಬೆಯ ತನುಜೆ। ಕರುನಾಡ । ಕುಲದೇವಿ ।**

–∪ ∪ ∪ –∪ ∪∪ – ∪ –

**ಕೆಚ್ಚೆದೆಯ । ಕನ್ನಡತಿ । ನಮ್ಮ ತಾ। ಯಿ – ಮುಡಿ**

∪ ∪ ∪∪∪ ∪ ∪ ∪ ∪ ∪ ∪ ∪ ∪ ∪ – ∪∪∪ ∪ ∪

**ಸಿರಿಯೊಡಲ । ಸೊಬಗಿನಲಿ । ಮಮತೆಯಾ । ಮಡಿಲಿನಲಿ**

–∪ ∪ ∪ ∪ ∪ ∪∪∪ ∪ ∪ – ∪

**ಹಾಲುಣಿಸಿ । ಹರಸುವಳು । ಕರುಣಾಮ । ಯಿ – ಮುಡಿ**

**'ಚುಂಚಾದ್ರಿ ಚಂದ್ರಿಕೆ'** ಆಧುನಿಕ ಕಾಲಮಾನದಲ್ಲಿ ರಚಿತವಾಗಿರುವ ಧಾರ್ಮಿಕ ಕೃತಿ. ಈ ಕೃತಿ ಮಹಾಕಾವ್ಯವೇ? ಅಲ್ಲವೇ? ಎನ್ನುವುದನ್ನು ನಿರ್ಧರಿಸಲು, ಪಾರಂಪರಿಕ ಮಹಾಕಾವ್ಯಗಳ ಲಕ್ಷಣಗಳನ್ನು ಆಧಾರವಾಗಿ ಪರಿಗಣಿಸುವುದು ಸರಿಯೇ? ಎನ್ನುವ ಅಭಿಪ್ರಾಯ ನಮ್ಮದು, ಆಧುನಿಕ ಕೃತಿಯೊಂದನ್ನು ಪಾರಂಪರಿಕ ಮಹಾಕಾವ್ಯ ಲಕ್ಷಣಗಳೊಂದಿಗೆ ಹೋಲಿಸುವುದು ಅಷ್ಟೇನೂ ಸರಿಯಲ್ಲವೆನಿಸುತ್ತದೆ. ಆಧುನಿಕ ಸಂದರ್ಭದ ಮಹಾಕಾವ್ಯಗಳು, ಪಾರಂಪರಿಕ ಮಹಾಕಾವ್ಯಗಳಂತೆಯೇ ಇರಬೇಕೆಂದು ಶರತ್ತು ವಿಧಿಸುವುದು ಒಪ್ಪಿತವಲ್ಲ. ಒಂದು ಕೃತಿಯನ್ನು, ಆ ಕೃತಿಯ ಮಿತಿಯಲ್ಲಿಯೇ ಅದರ ಶ್ರೇಷ್ಠತೆಯನ್ನು ಪತ್ತೆ ಹಚ್ಚಬೇಕೇ ಹೊರತು ಕೇವಲ ಇತರ ಕೃತಿಗಳ ಹೋಲಿಕೆಯ ಮೂಲಕವಲ್ಲ ಎಂಬುದು ನಮ್ಮ ಅಭಿಪ್ರಾಯ. ಹೀಗಾಗಿ ಇಲ್ಲಿಯವರೆಗೂ ಚರ್ಚಿಸಿದ ಮಹಾಕಾವ್ಯ ಲಕ್ಷಣಗಳ ಹಿನ್ನಲೆಯಲ್ಲಿ ಚುಂಚಾದ್ರಿ ಚಂದಿಕೆಯ ಸತ್ವ ನಿರ್ಧಾರ ಅನಗತ್ಯವೆನಿಸುತ್ತದೆ.

**'ಚುಂಚಾದ್ರಿ ಚಂದ್ರಿಕೆ'** ಸುಮಾರು ೩೫೦ ಪುಟಗಳಲ್ಲಿ ಹರಡಿಕೊಂಡ ಧಾರ್ಮಿಕ ಆಶಯಗಳುಳ್ಳ ಕೃತಿ. ನಾಥ ಪಂಥದ ನೀತಿ ನಿಯಮಗಳ ಮಿತಿಯಲ್ಲಿ ರಚಿತವಾದ ಕೃತಿ. ಸ್ವರ್ಗದ ಅಧಿಪತ್ಯಕ್ಕಾಗಿ ಬ್ರಹ್ಮ-ವಿಷ್ಣು ಇಬ್ಬರ ತಿಕ್ಕಾಟ; ಈಶ್ವರನು ಬ್ರಹ್ಮ ಮತ್ತು ವಿಷ್ಣುವನ್ನು ದಮನ ಮಾಡುವುದು; ತಪಸ್ಸು ಮಾಡಲು ಈಶ್ವರನು ಯೋಗ್ಯ ಸ್ಥಳ ಹುಡುಕಿ ಹೊರಡುವುದು; ಚುಂಚಾದ್ರಿಯ ರಮಣೀಯ ಸೌಂದರ್ಯ; ಸೀತೆಯನ್ನು ಕಳೆದುಕೊಂಡ ರಾಮನಿಗೆ ಈಶ್ವರ ಅಭಯ ತುಂಬುವುದು; ಭೈರವನ ಸೃಷ್ಟಿ; ಭೈರವನಿಂದ ಸಿದ್ಧಮುನಿಗೆ ಪಟ್ಟ; ಸಿದ್ಧಮುನಿ ಮೊದಲಾಗಿ ಬಾಲಗಂಗಾಧರರವರೆವಿಗೂ ಸುಮಾರು ೭೧ ಮಠಾಧಿಪತಿಗಳ ವಿಸ್ತಾರ ಬೋಧನೆ; ನಾಥ ಪಂಥ ಮಹನೀಯರುಗಳ ಜೀವನ ಗಾಥೆ, ಬಾಲ್ಗಂಗಾಧರ ಜೀವನ, ಬೋಧನೆ ಮತ್ತು ಸಾಧನೆಗೆ ಸಂಬಂಧಿಸಿದಂತೆ ಕವಿ ಹನುಮೇಗೌಡರು ವಿಸ್ತಾರವಾಗಿ ವರ್ಣಿಸುತ್ತಾರೆ. ಇದೊಂದು ಧಾರ್ಮಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಆಶಯಗಳನ್ನು ಒಳಗೊಂಡ ಕೃತಿ ಆಗಿರುವುದರಿಂದ, ಕೇವಲ ಪ್ರಾಚೀನ ಮಹಾಕಾವ್ಯಗಳ ನಿಲುವಿನಿಂದ ಅವಲೋಕಿಸುವಂತೆ ಅವಲೋಕಿಸುವುದು ಸರಿಯಲ್ಲ.

ಧಾರ್ಮಿಕ ಕೃತಿಗಳಿಗೆ ತಮ್ಮದೇ ಆದ ಮಿತಿಗಳಿರುತ್ತವೆ. ಆ ಮಿತಿಗಳಲ್ಲೂ ಒಂದು ಸತ್ಕೃತಿಯಾಗಿ ನಿಂತು ಓದುಗರ ಮನ ಗೆಲ್ಲುವುದೇ ಇಂಥ ಕೃತಿಗಳ ಸಾಧನೆ.

"ಇಲ್ಲಿ ಪುರಾಣವಿದೆ; ಇತಿಹಾಸವೂ ಇದೆ; ದಿವ್ಯತೆಯೂ ಇದೆ; ಭವ್ಯತೆಯೂ ಇದೆ; ಸಂಕಲ್ಪವಿದೆ; ಸಾಧನೆಯಿದೆ; ಎರಡು ಸಾವಿರಕ್ಕೂ ಮಿಕ್ಕ ಪದ್ಯಗಳನ್ನು ಓದುವುದೇ ಒಂದು ಅಪೂರ್ವ ದೀಕ್ಷೆ. ನಾನಂತೂ ಹಾಡಿಕೊಂಡೇ ಓದಿಕೊಂಡಿದ್ದೇನೆ. ಪ್ರಾಸಾನುಪ್ರಾಸಗಳಿಂದ ಲಯಬದ್ಧ ರಚನೆಗಳಿಂದ ಗೇಯ ಗುಣದ ಆಂತರ್ಯದಿಂದ ರಮ್ಯ ಚರಿತ್ರೆಯಿಂದ ಸಾಧನಾ ಶಿಖರಗೊಂಡು ಈ ಬೃಹತ್ಕಾವ್ಯಕ್ಕೆ ಒಂದು ಭದ್ರ ಬುನಾದಿ ಇದೆ; ಒಂದು ಉತ್ತುಂಗ ಕಲ್ಪನೆ ಇದೆ; ಕಾಣ್ಕೆಯ ಕೇತನವಿದೆ; ಆಧ್ಯಾತ್ಮದ ಚೇತನವಿದೆ.

ಇದು ನೆಲದ ಕಾವ್ಯವೂ ಹೌದು; ಮುಗಿಲ ಕಾವ್ಯ ವರ್ಷಿಣಿಯೂ ಹೌದು, ಚಿಂತನ ಪರ್ಜನ್ಯವೂ ಹೌದು; ವೈಚಾರಿಕ ಹವಿಸ್ಸೂ ಹೌದು; ಕ್ಷೇತ್ರ ಮಹಿಮೆಯೂ ಹೌದು; ಸ್ವಾಮೀಜಿಯ ಜೀವನ ಚರಿತ್ರೆಯೂ ಹೌದು; ಧರ್ಮ ಪಾರಾಯಣವೂ ಹೌದು; ನೀತಿ ಸಂಹಿತೆಯ ರಸಾಯನವೂ ಹೌದು; ಮಹಾಕವಿ ಕುವೆಂಪು ಅವರಂತೆ ಸಂಸ್ಕೃತ ಭೂಯಿಷ್ಟ ಶೈಲಿ ಶ್ರೀಹನುಮೇಗೌಡರದು. ಪ್ರತಿಮೆಗಳಿವೆ; ಹೋಲಿಕೆಗಳಿವೆ; ರೂಪಕಗಳಿವೆ; ನುಡಿ ದೀಪಕಗಳಿವೆ; ರಂಜಕ ಮಾತುಗಳಿವೆ; ಅತಿರಂಜಿತ ಬಣ್ಣನೆಗಳಿವೆ; ಸೃಜನಶೀಲ ಭೂಮಿ ಇದೆ; ಕಲ್ಪನಾ ಸಾಮ್ರಾಜ್ಯದ ಭಾನುವೂ ಇದೆ; ಹೀಗಾಗಿ **"ನೆಲ ಮುಗಿಲ ಸ್ನೇಹ ಸಂಪರ್ಕದ ಮಹಾಕಾವ್ಯ ಇದು"** – ಎಂದು ದೊಡ್ಡರಂಗೇಗೌಡರು ಮುನ್ನುಡಿಯಲ್ಲಿ **'ಚುಂಚಾದ್ರಿ ಚಂದ್ರಿಕೆ'** ಬಗ್ಗೆ ಅಭಿಮಾನದಿಂದ ಬರೆದಿದ್ದಾರೆ.

ಸಿ.ಹನುಮೇಗೌಡರು, ಆದಿಚುಂಚನಗಿರಿ ಮಠ ಮತ್ತು ೭೧ನೇ ಮಠಾಧಿಪತಿಯಾದ ಶ್ರೀ ಬಾಲಗಂಗಾಧರನಾಥರ ಬಗ್ಗೆ ಅಪಾರ ಗೌರವ ಭಾವನೆ ತಳೆದವರಾಗಿದ್ದಾರೆ. ಅವರು ನಿವೃತ್ತಿಯಾದ ಮೇಲೆ ಶ್ರೀಮಠದ ಶಿಕ್ಷಣ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿರುವುದರಿಂದ ಶ್ರೀಮಠದ ಹಾಗೂ ಸ್ವಾಮೀಜಿಗಳ ಅಪಾರ ಪ್ರಭಾವ ಶ್ರೀಯುತರ ಮೇಲೆ ಆಗಿದೆ. ಈ ಪ್ರಭಾವದ ಪರಿಣಾಮವಾಗಿಯೇ, ಗೌಡರು ಮಹಾ ಕೃತಿಯೊಂದನ್ನು ರಚಿಸಬೇಕೆಂದು ಹೊರಟು **"ಶ್ರೀಆದಿಚುಂಚನಗಿರಿ ಮಹಾಕ್ಷೇತ್ರ ಕುರಿತ ಪಾರಂಪರಿಕ ಮಹಾಕಾವ್ಯ"**ವೆಂದು ಚುಂಚಾದ್ರಿ ಚಂದ್ರಿಕೆಯನ್ನು ಕರೆದುಕೊಂಡಿದ್ದಾರೆ. ಕೃತಿಯನ್ನು ಆಸ್ವಾದಿಸುವಾಗ ತಪೋವನವನ್ನು ಹೊಕ್ಕಿದಂಥ ಅನುಭವ ಯಾರಿಗೇ ಆದರೂ ಆಗುತ್ತದೆ. ಹಿಂದಿ ಶಿಕ್ಷಕರಾದ ಗೌಡರು, ಇಷ್ಟರ ಮಟ್ಟಿಗೆ ಕನ್ನಡವನ್ನು ಇಲ್ಲಿ ದುಡಿಸಿಕೊಂಡಿದ್ದಾರಲ್ಲ ಎನ್ನುವ ಸೋಜಿಗವೇಳುತ್ತದೆ. ಒಟ್ಟಿನಲ್ಲಿ, ಮಹಾಕಾವ್ಯದ ಆದರ್ಶವೆಂದು ಹೇಳಲಾಗುವ **ಗಾಂಭೀರ್ಯ, ವಿಸ್ತಾರ, ಜೀವನಪರ ಕಾಳಜಿ, ಮೌಲ್ಯಗಳ ಬೋಧನೆ, ಉತ್ಸಾಹ ಚಮತ್ಕಾರಿಕೆಗಳಿಂದ ಕೂಡಿದ ಭಾಷೆ, ಹೋಲಿಕೆಯ ವಿದ್ವತ್ತು, ದರ್ಶನದ ಮಹತ್ತು – 'ಚುಂಚಾದ್ರಿ ಚಂದ್ರಿಕೆ'**ಯಲ್ಲಿ ಕಾಣಲು ಸಾಧ್ಯ.

# ಸಮಾರೋಪ

ಶ್ರೀಹನುಮೇಗೌಡರು ಶ್ರೀಆದಿಚುಂಚನಗಿರಿ ಮಠದ ಜೊತೆಯಲ್ಲಿ ಬೆಳೆಸಿದ ಸಾಹಚರ್ಯದ ಫಲವೇ **"ಚುಂಚಾದ್ರಿ ಚಂದ್ರಿಕೆ"** ಮಹಾಕಾವ್ಯ. ಶ್ರೀ ಮಠ ಆಧ್ಯಾತ್ಮಿಕ ವಿಚಾರಗಳ ಮಿಡಿತವುಳ್ಳ ಸ್ಪಂದನೆಗಳನ್ನು ಸೂಚಿಸುವ ಸ್ಥಳ. ಇದರ ಪ್ರಭಾವಕ್ಕೆ ಒಳಗಾದ ಗೌಡರಿಗೆ, ಶ್ರೀಮಠದ ಇತಿಹಾಸ, ನಾಥ ಪಂಥದ ವಿಚಾರ, ಬಾಲಗಂಗಾಧರರ ತೀವ್ರ ಪ್ರಭಾವ ನಾನಾ ರೀತಿಯಲ್ಲಿ, ನಾನಾ ಧಾಟಿಯಲ್ಲಿ ಪರಿಣಾಮ ಉಂಟು ಮಾಡಿವೆ. ಈ ಎಲ್ಲ ಪ್ರಭಾವ ಮತ್ತು ಪರಿಣಾಮಗಳಿಗೆ ಸಿಕ್ಕ ಹನುಮೇಗೌಡರ ಮನಸ್ಸು ಸಹಜವಾಗಿ ಆಧ್ಯಾತ್ಮಿಕತೆಯ ಕಡೆಗೆ ವಾಲಿದೆ. ಉತ್ತಮ ಶಿಕ್ಷಣ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದವರು, ಶ್ರೀಮಠಕ್ಕೆ ಸಂಬಂಧಿಸಿದ ಮಹಾಕಾವ್ಯವನ್ನು ಬರೆಯುವಾಗ ಸಹಜವಾಗಿಯೇ ಅಲ್ಲಿನ ಶಕ್ತಿ-ಸಂಪನ್ನತೆ ಕಂಡು ವಿಸ್ಮಿತರಾಗಿದ್ದಾರೆ. ನನ್ನಿಂದ ಈ ಕಾವ್ಯ ರಚನೆ ಸಾಧ್ಯವೇ? ಎಂಬ ಅಳುಕಿನಿಂದಲೇ ಕಾವ್ಯ ರಚನೆ ಆರಂಭಿಸಿದ್ದಾರೆ. ಭೈರವನನ್ನು ಸ್ಮರಿಸಿಕೊಂಡು ಕಾವ್ಯ ರಚನೆಯಲ್ಲಿ ತೊಡಗುತ್ತಿದ್ದೆ ಎಂದು ಅವರೇ ಮುನ್ನುಡಿಯಲ್ಲಿ ಹೇಳಿಕೊಳ್ಳುತ್ತಾರೆ.

ಹದಿನೇಳು ವರ್ಷಗಳ ಸತತ ಪ್ರಯತ್ನದ ಫಲವಾಗಿ ಈ ಕೃತಿ ಸೃಷ್ಟಿಗೊಂಡಿದೆ. ಹನುಮೇಗೌಡರ ಇತಿಹಾಸ ಪ್ರಜ್ಞೆ ಸೋಜಿಗ ಮೂಡಿಸುವಂಥದ್ದು. "ಅದೆಷ್ಟು ಶ್ರಮಿಸಿದರೋ, ಅವೆಷ್ಟು ಕಡತಗಳನ್ನು ಕೆದಕಿದರೋ, ಎಷ್ಟು ಅಲೆದಾಡಿದರೋ, ಎಷ್ಟು ರಾತ್ರಿಗಳ ನಿದ್ದೆ ಕೆಟ್ಟರೋ ಅಂತು ಅವೆಷ್ಟು ಹೆಸರುಗಳು, ಅವೆಷ್ಟು ಹಿನ್ನೆಲೆಗಳು, ಅವೆಷ್ಟು ವಿವರಣೆಗಳು, ಅವೆಷ್ಟು ದಶಕ ಮಠಪತಿಗಳ ಪರಿಚಯ, ಅದೆಷ್ಟು ಪೂರ್ಣ ಪ್ರಮಾಣದ ಸದ್ಯದ ಶ್ರೀಶ್ರೀಗಳ ಚರಿತ್ರೆ... ಇವುಗಳೆಲ್ಲ ಇಂತಹದೊಂದು ಮಠದ ಬುನಾದಿಯನ್ನು ಭದ್ರ ಮಾಡಿದೆ" ಎಂದು **ಪಾವಗಡ ಪ್ರಕಾಶರಾವ್**ರವರು ಹನುಮೇಗೌಡರ ಮಹಾಕಾವ್ಯ ರಚನೆಯ ಹಿಂದಿನ ಶ್ರಮವನ್ನು ತೂಗಿ ನೋಡಿದ್ದಾರೆ.

ಶ್ರೀಹನುಮೇಗೌಡರು ಒಳ್ಳೆಯ ಶಿಕ್ಷಣ ತಜ್ಞರು; ಹಾಗೆಯೇ ಒಳ್ಳೆಯ ಬರಹಗಾರರಾಗಿದ್ದಾರೆ. ಆಧ್ಯಾತ್ಮ ಲೋಕದತ್ತ ವಿಪುಲ ಆಸಕ್ತಿ ಹೊಂದಿದವರಾಗಿದ್ದಾರೆ. ಮೂಲತಃ ಭಾವ ಜೀವಿಯಂತೆ ಕಾಣುತ್ತಾರೆ. ಆ ಕಾರಣದಿಂದಲೇ ಅಭಿಜಾತ ಶೈಲಿಯಲ್ಲಿ, ನವನವೀನ ರೂಪದಲ್ಲಿ ಇಂಥ ಬೃಹತ್ ಕಾವ್ಯ ಹುಟ್ಟಲು ಸಾಧ್ಯವಾಗಿದೆ.

ಹನುಮೇಗೌಡರ ಅಂತರ್ಯದಲ್ಲಿ ಪಾಂಡಿತ್ಯವಿದೆ; ಕಲ್ಪನೆಯಲ್ಲಿ ಔನ್ನತ್ಯವಿದೆ. ಕಾವ್ಯಕ್ಕೆ ಸರಿದೂಗುವ **'ಕಥಾಬಿತ್ತಿ'**ಯನ್ನು ಗೌಡರು ಸೊಗಸಾಗಿ ರೂಪಿಸಿಕೊಂಡಿದ್ದಾರೆ. ಹೆಚ್ಚು ವಿಸ್ತಾರವಾದ **'ಕಥಾಬಿತ್ತಿ',** ಇಲ್ಲಿ ಗೌಡರ ಔಚಿತ್ಯ ಪ್ರಜ್ಞೆಯಿಂದ ಸಂಕ್ಷೇಪಗೊಂಡಿದೆ. ಸಂಯಮ ಈ ಕಾವ್ಯದ ಮಹತ್ವದ ಲಕ್ಷಣ; ಕವಿ ಯಾವುದೇ ಕಾರಣಕ್ಕೂ, ಎಲ್ಲಿಯೂ ಉದ್ರೇಕ ವ್ಯಕ್ತ ಮಾಡುವುದಿಲ್ಲ. ನಪಿರಾದ ಭಾಷೆ ಮೂಲಕ ಶಾಂತವಾಗಿ ಬರೆಯುವುದು ಗೌಡರಿಗೆ ಕರಗತವಾದಂತಿದೆ. ತಮ್ಮ ಬಗ್ಗೆ

ತಮಗೆ ಅಪಾರ ನಂಬಿಕೆಯನ್ನು ಗೌಡರು ಹೊಂದಿದ್ದಾರೆ. ತೀವ್ರ ಆತ್ಮ ವಿಶ್ವಾಸದ ಖನಿ ಆಗಿರುವುದರಿಂದಲೇ ಇಂಥ ಉತ್ಕೃಷ್ಟ ಕಾವ್ಯ ರಚನೆ ಸಾಧ್ಯವಾಗಿದೆ.

ಹನುಮೇಗೌಡರ ಅಪಾರ ಜೀವನಾನುಭವ ಎಲ್ಲರನ್ನೂ ಆಕರ್ಷಿಸುವಂಥದ್ದಾಗಿದೆ. ಪ್ರತಿ ವರ್ಣನೆಯಲ್ಲೂ ಈ ಅನುಭವ ಹೆಪ್ಪುಗಟ್ಟಿ ನಿಂತಿದೆ. ನಾಥ ಮಹನೀಯರುಗಳ ಬೋಧನೆಯನ್ನು ವರ್ಣಿಸುವಾಗಲಂತೂ ಈ ಅಂಶ ಎದ್ದು ಕಾಣುತ್ತದೆ. **"ಕಠಿಣ ನುಡಿ ಕಾಡ್ಗಿಚ್ಚು, ಚಾಡಿ ನುಡಿ ಚಿತೆಯ ಝಳ", "ಕೀರ ಬಕ ಕಾಕೋಲ ಕರೇಟು ಕ್ರಕರೆಗಳೆ ಕಂಡಿಹಿರ ಕುಲಜಾತೆ ಭೂಮಿಜೆಯನು", "ಚೆಲ್ಲಿತ್ತು ಚಂದ್ರಮನ ಚಂದ್ರಿಕೆಯ ಚಕಚಕಿಸಿ"; "ರಸ ಋಷಿಯ ರಮ್ಯ ನೆಲೆ ಯತಿವರರ ಯೋಗ ನೆಲೆ" "ನೇಣಾಯ್ತು ನಿರ್ಮಿಸಿದ ರೇಷ್ಮೆ ನೂಲು"** – ಇಂಥ ಮಾತುಗಳು ಅನುಭವದ ಮೂಸೆಯಲ್ಲಿ ಬೆಂದು ಬಂದವುಗಳೇ!

ಬದುಕು ಬೆಂಗಾಡಾದಾಗ, ಅಲ್ಲಿನ ಸಾರವೆಲ್ಲವೂ ಸೋರಿ ಹೋಗಿ ಎಲ್ಲ ಬರಿದು ಬರಿದು ಎನಿಸಿದಾಗ, ಇಂಥ ಕಾವ್ಯಗಳನ್ನು ಓದುವುದರಿಂದ ಕಳೆದು ಹೋದ ಜೀವ ಚೈತನ್ಯ ಮರಳಿ ಬರುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಐಹಿಕ ಬದುಕಿನ ಮಿತಿಯನ್ನು ಈ ಕಾವ್ಯ ಪದೇ ಪದೇ ಹೇಳುವುದರಿಂದ ಬದುಕಿನ ಸಂಕಷ್ಟಗಳು, ನೋವುಗಳು, ಸಂಕಟಗಳು ಎದುರಾದಾಗ ಅವುಗಳಿಗೆ ತೀವ್ರವಾಗಿ ಸ್ಪಂದಿಸಬಾರದೆನ್ನುವ ಎಚ್ಚರಿಕೆಯನ್ನು ಈ ಕಾವ್ಯ ಕೊಡುತ್ತದೆ. ಜೀವಕ್ಕೆ ಕಂಪು ಮತ್ತು ತಂಪಿನ ಅನುಭವ ನೀಡುತ್ತದೆ. ಚುಂಚಾದ್ರಿ ಚಂದ್ರಿಕೆಯು ಎಲ್ಲ ವಯೋಮಾನದವರೂ, ಸರ್ವ ಕಾಲದಲ್ಲೂ ಓದಬಹುದಾದ ಕೃತಿಯಾಗಿದೆ. ಇದರಲ್ಲಿನ ಸಾರವನ್ನು ಜೀವನದಲ್ಲಿ ಅಳವಡಿಸಿಕೊಂಡರೆ ನಮ್ಮ ವ್ಯಕ್ತಿತ್ವ ಕೂಡ ಹೊಳಪಿನಿಂದ ಕೂಡಿರುತ್ತದೆ; ಉಳಿದವರಿಗೆ ಅನುಕರಣೀಯ ಎನಿಸುವಂತೆ ಮಾರ್ಪುಗೊಳ್ಳುತ್ತದೆ. ದಿನೇ ದಿನೇ ಹೆಚ್ಚುತ್ತಿರುವ ಒತ್ತಡದ ಬದುಕಿನಲ್ಲಿ, ಇಂಥ ಆಧ್ಯಾತ್ಮಿಕ ಕಾವ್ಯಗಳಲ್ಲಿ ಅಧ್ಯಯನವು ಸಾಕಷ್ಟು ನಿರಾಳಕ್ಕೆ ಕಾರಣವಾಗುತ್ತದೆ. ಬದುಕಿನ ಬಗ್ಗೆ ಅಸಹ್ಯದ ಭಾವನೆ ಹೋಗಿ, ಪ್ರೀತಿಯ ಸಿಂಚನ ಸಾಧ್ಯವಾಗುತ್ತದೆ.

# ಗ್ರಂಥಸೂಚಿ


೧. ಅಮೃತೂರು ದಾಸಪ್ಪ (ಸಂ.) **ಆದಿಚುಂಚನಗಿರಿ ಸ್ಥಳ ಮಹಾತ್ಮ್ಯೆ**, ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ, ಶ್ರೀ ಆದಿಚುಂಚನಗಿರಿ ಕ್ಷೇತ್ರ, ೧೯೯೬.

೨. **ಶ್ರೀ ಆದಿಚುಂಚನಗಿರಿ ಕ್ಷೇತ್ರ ಮಹಿಮೆ, ಶ್ರಿ ಆದಿಚುಂಚನಗಿರಿ ಗ್ರಂಥಮಾಲೆ**, ಆದಿಚುಂಚನಗಿರಿ, ೨೦೦೧

೩. ಕಪಟರಾಳ ಕೃಷ್ಣರಾಯ, **ಕರ್ನಾಟಕದ ಲಾಕುಳ ಶೈವರ ಇತಿಹಾಸ**, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೫

೪. ಕುಲಕರ್ಣಿ.ಚಿ, **ಶ್ರೀನವನಾಥ ಕಥಾಸಾರ**, ಸರಸ್ವತಿ ಪುಸ್ತಕ ಭಂಡಾರ, ಬೆಳಗಾವಿ, ೧೯೭೭

೫. ಕೃಷ್ಣಮೂರ್ತಿ.ಮ.ಸು, **ಸಿದ್ಧ ಸಾಹಿತ್ಯ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೨

೬. ಕೃಷ್ಣಮೂರ್ತಿ.ಮ.ಸು, **'ನಾಥ ಪಂಥ'**, ಶ್ರೀಕಂಠತೀರ್ಥ, ತೀನಂಶ್ರೀ ಅಭಿನಂದನ ಗ್ರಂಥ (ಸಂ.) ಚಿದಾನಂದ ಮೂರ್ತಿ.ಎಂ., ಮೈಸೂರು, ೧೯೭೫

೭. ಕುವೆಂಪು, **ತಪೋನಂದನ**, ಉದಯರವಿ ಪ್ರಕಾಶನ, ಮೈಸೂರು

೮. ಕೃಷ್ಣಾಜಿ ಶ್ರೀಪಾದರಾವ್ ಕುಲಕರ್ಣಿ; **ಶ್ರೀ ನವನಾಥ ಭಕ್ತಿಸಾರ**; ಕೆ.ಎಸ್.ಕುಲಕರ್ಣಿ ಬುಕ್ ಡಿಪೋ, ಹುಬ್ಬಳ್ಳಿ, ತೃತೀಯ ಆವೃತ್ತಿ ೧೯೮೭

೯. ಗೋಪಾಲಕೃಷ್ಣಯ್ಯ.ಕೆ.ಎಲ್, **ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦. ಗೋರಖನಾಥ, **ಸಿದ್ಧ ಸಿದ್ಧಾಂತ ಪದ್ಧತಿ (ಸಂಸ್ಕೃತ)**, ಅನು; ಕಡವ ಶಂಭು ಶರ್ಮ, ಶ್ರೀ ಕಡವ ಶಂಭು ಶರ್ಮ ಸ್ಮಾರಕ ಪ್ರತಿಷ್ಠಾನ, ಪುತ್ತೂರು, ೨೦೦೫

೧೧. ಚಾಮರಸ, **ಪ್ರಭುಲಿಂಗಲೀಲೆ**, ಸಂ. ಎಸ್.ವಿದ್ಯಾಶಂಕರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

೧೨. ಜಾನಪದ, **ಶ್ರೀ ಆದಿಚುಂಚನಗಿರಿ**, ಸಂ, ಕರಾಕೃ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೬೦

೧೩. ಜಾನಪದ, **ಶ್ರೀ ಆದಿಚುಂಚನಗಿರಿ ಜನಪದ ಗೀತೆಗಳು**, ಸಂ. ಚಂದ್ರಶೇಖರನಾಥ, ಶ್ರಿ ಆದಿಚುಂಚನಗಿರಿ ಗ್ರಂಥಮಾಲೆ, ಆದಿಚುಂಚನಗಿರಿ, ೧೯೫೯

೧೪. ನಿಂಗಪ್ಪ ಮುದೇನೂರು, **ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು**, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೧೫. ಭಟ್ಟ.ಜಿ.ಎಸ್, **ಮಹಾಕಾವ್ಯ: ಒಂದು ಅವಲೋಕನ**, ಚೇತನ ಬುಕ್ ಹೌಸ್, ಮೈಸೂರು, ೧೯೯೬

೧೬. ರಹಮತ್ ತರೀಕೆರೆ.ಕೆ, **ಕರ್ನಾಟಕದ ನಾಥಪಂಥ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೭. ರಾಜಶೇಖರ.ಪಿ.ಕೆ, **ಸಿರಿಚುಂಚನಗಿರಿ,** ಶ್ರೀ ಆದಿಚುಂಚನಗಿರಿ ಸಂಸ್ಥಾನ ಮಠ, ಚುಂಚನಗಿರಿ, ೧೯೯೬

೧೮. ರಾಜೇಶ್ವರಿಗೌಡ.ಕೆ, **ಆದಿಚುಂಚನಗಿರಿ: ಒಂದು ಸಾಂಸ್ಕೃತಿಕ ಅಧ್ಯಯನ,** ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ, ಶ್ರೀ ಆದಿಚುಂಚನಗಿರಿ ಕ್ಷೇತ್ರ, ೨೦೦೧

೧೯. ರಾಮಚಂದ್ರ ಚಿಂತಾಮಣ ಢೇರೆ, **ನಾಥ ಸಂಪ್ರದಾಯದ ಇತಿಹಾಸ,** ಕನ್ನಡ ಜಾಗೃತಿ ಪುಸ್ತಕ ಮಾಲೆ, ಅಲ್ಲಮ ಪ್ರಭು ಜನ ಕಲ್ಯಾಣ ಸಂಸ್ಥೆ, ಸಿದ್ಧ ಸಂಸ್ಥಾನ ಮಠ, ಚಿಂಚಣಿ, ಚಿಕ್ಕೋಡಿ (ತಾ), ಬೆಳಗಾವಿ (ಜಿ), ೨೦೦೪

೨೦. ಲಿಂಗಯ್ಯ.ಡಿ.(ಸಂ.), **ಆದಿಚುಂಚನಗಿರಿ (ಸ್ಮರಣ ಸಂಚಿಕೆ),** ಆದಿಚುಂಚನಗಿರಿ ಜಗದ್ಗುರುಗಳ ಸ್ವಾಗತ ಸಮಿತಿ, ಬೆಂಗಳೂರು, ೧೯೭೧

೨೧. ಶಿವರುದ್ರಪ್ಪ.ಜಿ.ಎಸ್., **ಮಹಾಕಾವ್ಯ ಸ್ವರೂಪ,** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೬

೨೨. ಶ್ರೀಕಂಠ ಕೂಡಿಗೆ (ಸಂ.), **ಪಾಶ್ಚಾತ್ಯ ಮಹಾಕಾವ್ಯಗಳು,** ಕನ್ನಡ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಬಿ.ಆರ್.ಪ್ರಾಜೆಕ್ಟ್, ೧೯೮೫

೨೩. ಸಿದ್ಧಗಂಗಯ್ಯ.ಹೆಚ್.ಕೆ., **ಯುಗ ಯೋಗಿ,** ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ, ಶ್ರೀ ಆದಿಚುಂಚನಗಿರಿ, ೧೯೯೬

೨೪. ಸಿದ್ಧಗಂಗಯ್ಯ ಹೆಚ್.ಕೆ, **ವಿಶ್ವ ಸಂತರು,** ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ, ಶ್ರೀಆದಿಚುಂಚನಗಿರಿ ಕ್ಷೇತ್ರ, ೧೯೯೯

# ಅನುಬಂಧ



೦೧. ಶ್ರೀಕಾಲಭೈರವೇಶ್ವರ ಸ್ವಾಮಿ



೦೨. ಶ್ರೀಗಂಗಾಧರೇಶ್ವರ ಸ್ವಾಮಿ



೦೩. ಶ್ರೀಆದಿಚುಂಚನಗಿರಿ ಮಠ



೦೪. ಶ್ರೀಬಾಲಗಂಗಾಧರನಾಥ ಸ್ವಾಮೀಜಿ



೦೫. ಶ್ರೀಕ್ಷೇತ್ರದ ರಥೋತ್ಸವ ಸಂದರ್ಭ



೦೬. ಶ್ರೀಗಳಿಂದ ಪ್ರವಚನ



೦೭. ಚಿಕ್ಕಮಗಳೂರಿನ ತಾಂತ್ರಿಕ ವಿದ್ಯಾಲಯ



೦೮. ಮೈಸೂರಿನ ಬಿ.ಜಿ.ಎಸ್. ಅಪೋಲೋ ಆಸ್ಪತ್ರೆ



೦೯. ಶ್ರೀಆದಿಚುಂಚನಗಿರಿ ವೈದ್ಯಕೀಯ ಕಾಲೇಜು,

ಬಾಲಗಂಗಾಧರನಾಥ ನಗರ

